# ಅಲ್ಲಮ ಪ್ರಭುವಾದ

ಮತ್ತು

# ಇತರ ಪದ್ಯಗಳು

# ಅಲ್ಲಮ, ಪ್ರಭುವಾದ

ಮತ್ತು

# ಇತರ ಪದ್ಯಗಳು

ಶಾಮಸುಂದರ ಬಿದರಕುಂದಿ



ಆಲೋಚನ ಪ್ರಕಾಶನ ಗದಗ





Allama, Prabhuvada : Verses in Kannada
by: Shamasunder Bidarakundi, Adarsha Shikshana
Samiti's College of Commerce, GADAG 582101
First Print:September 1976; 1000 copies;Pages;80+IV
Published by : Alochana Prakashana, Extension
GADAG

Printed at : Ravi Printers, GADAG
PRICE: Rs. 4/—
ಬೆಲೆ ರೂ. ೪



ರಕ್ಷಾಪತ್ರ : ಈಶ್ವರಚಂದ್ರ

ನೆರವು : ಸಿಂಡಿಕೇಟ್ ಬ್ಯಾಂಕ್, ಗದಗ [illegible]




ಪಾ. ಲ. ಸುಬ್ರಹ್ಮಣ್ಯಂ
ದೇಶಪಾಂಡೆ ಸುಬ್ಬರಾಯ:
ಪ್ರೀತಿಯಿಂದ, ಸ್ನೇಹದಿಂದ

# ಪರಿವಿಡಿ

## ಪ್ರಯೋಗ : ಮೂರು



## ಪ್ರಯೋಗ ನಾಲ್ಕು : ರೂಪಾಂತರಗಳು

## ಕೆಲವು ಮಾತುಗಳು

ಪ್ರಸ್ತುತ ಪುಸ್ತಕ ಹೊರುವಷ್ಟು, ನನ್ನ ಯೋಚನೆ, ಅನುಭವ, ತಿಳುವಳಿಕೆ ಹಾಗೂ ಆಗಂತುಕ ಲಹರಿಗಳು ತಮ್ಮ ಸಮಸ್ತ ಮೈಯನ್ನು ಒಡ್ಡಿಕೊಳ್ಳುವಷ್ಟು ರಚನೆಗಳೇ ಪದ್ಯರೂಪದಲ್ಲೀಗ ಪ್ರಕಟವಾಗುತ್ತಿರುವಾಗ 'ಕೆಲವು ಮಾತಿನ' ಗದ್ಯರೂಪದ ಈ ಪ್ರಸ್ತಾಪ ಅಗತ್ಯವೆ ? ಎಂದುಕೊಂಡಿದ್ದೆ. ನನ್ನ ಇಲ್ಲಿನ ರಚನೆಗಳಿಗೆ ಈ ಮಾತುಗಳು ಅಂತಿಮ ವ್ಯಾಖ್ಯಾನವಾಗುವ ಅಪಾಯವಿರದಿದ್ದರೆ ಈ ಮಾತುಗಳಿದ್ದರೆ ಅಡ್ಡಿ ಇಲ್ಲ ಎಂದು ಮನವರಿಕೆಯಾದದರಿಂದ ಬರೆಯುವುದು ಸಹಜವೆನಿಸಿತು.

'ಅಜ್ಞಗಾವಲು' (ಡಿ. ೧೯೭೧) ಪ್ರಕಟಗೊಂಡ ಐದು ವರ್ಷಗಳಾದ ನಂತರ 'ಅಲ್ಲಮಪ್ರಭುವಾದ ಮತ್ತು ಇತರ ಪದ್ಯಗಳು' ಪ್ರಕಟಗೊಳ್ಳುತ್ತಿವೆ. ಈ ಐದು ವರ್ಷಗಳಲ್ಲಿಯ ನನ್ನ ಮನಸ್ಸಿನ ಸ್ಪಂದನೆ; ಸುತ್ತ-ಮುತ್ತಲಿನದಕ್ಕೆ ನಾ ಕೊಡುವ ಪ್ರತಿ ಸ್ಪಂದನೆ; ನನ್ನೊಳಗೆ ನಡೆದಿರುವ, ನಡೆದು ಮುಗಿದಿರುವ ದ್ವಂದ್ವಗಳ ಸರಸ-ವಿರಸ; ನನ್ನ ಅಭಿರುಚಿಯನ್ನು ನೇರ್ಪಡಿಸಿದ, ಆಕಾಂಕ್ಷೆಯನ್ನು ಚುರುಕುಗೊಳಿಸಿದ ಸಂಗತಿ-ಸನ್ನಿವೇಶ—ಇಲ್ಲಿ ವಸ್ತುವಾಗಿ ಪಡಿಮೂಡಿವೆ.

ಅಂದಿನ ಬರವಣಿಗೆಯ ಎಡಚನ್ನು, ತಲಸ್ಪರ್ಶಿಯಲ್ಲದ ಸ್ಥೂಲದೃಷ್ಟಿಯನ್ನು ಇಂದಿನ ರಚನೆಗಳೂ ಮತ್ತೆ ಹೊತ್ತು ಸಾಗಿಸದಂತೆ; ನನ್ನ ಧ್ವನಿಯಲ್ಲಿ ಏಕತಾನತೆ ಮರುಕಳಿಸದಂತೆ ತುಂಬ ಎಚ್ಚರವಹಿಸಿದ್ದೇನೆ. ಗುಣಾವಗುಣಗಳ ಪರಿಶೀಲನೆಗೆ ಹಾದಿ ತೆರೆದೇ ಇರುವದರಿಂದ ಸಹೃದಯರು ಈ ಬೆಳವಣಿಗೆಯನ್ನು ಗುರುತಿಸುತ್ತಾರೆಂದು ನಂಬುತ್ತೇನೆ; ಪುರಸ್ಕರಿಸಬಹುದೆಂದು ಆಶಿಸುತ್ತೇನೆ.

ಪದ್ಯಗಳ ಗುಣ-ಸ್ವಭಾವ ಮತ್ತು ರಚನೆಯ ಹಿಂದೆ ನನಗಿರುವ ಪ್ರೇರಣೆ-ಉದ್ದೇಶಗಳಿಗೆ ಅನುಸಾರ ಅವುಗಳನ್ನಿಲ್ಲಿ 'ನಾಲ್ಕು ಪ್ರಯೋಗ'ಗಳಲ್ಲಿ ವಿಂಗಡಿಸಿಟ್ಟಿದ್ದೇನೆ. ಒಂದೊಂದು ತರದ ಪ್ರಯೋಗಕ್ಕೂ ಅದರದೇ ಆದ ಇತಿ-ಮಿತಿಗಳಿವೆ. ಕಾರಣ: ಇವು ನೀಡುವ ಪರಿಣಾಮಕ್ಕೂ ಸಂದರ್ಭೋಚಿತವಾದ ಅಂಥದೇ ಪರಿಮಿತಿ ಇದ್ದೀತು.

ಅಭಿವ್ಯಕ್ತಿರಂಗಕ್ಕೆ ಇವತ್ತಿನ ಪರಿಸರ-ಪರಿಸ್ಥಿತಿ ಸ್ಪಂದಿಸುತ್ತಿರುವ ರೀತಿ-ನೀತಿ ಅತ್ಯಂತ ಸುಮಾರಾದದ್ದು. ಗುಂಪಿನ ಮಟ್ಟದಲ್ಲಿ ನಡೆಯುತ್ತಿರುವ ಗುತ್ತೇದಾರೀ ಧೋರಣೆ; ಈ ಧೋರಣೆಗೆ ಮೂಲವಾದಿರುವ ಸ್ವಾರ್ಥ, ದುರಾಶೆ, ದುರಹಂಕಾರಗಳ ವೈಪರೀತ್ಯ ಮತ್ತು ವ್ಯಕ್ತಿ ಮಟ್ಟದಲ್ಲಿ ಹೊಗೆಯುತ್ತಿರುವ ಕ್ಷುಲ್ಲಕತನ, ಸ್ವಪರಿಜ್ಞಾನದ ಅಭಾವಗಳಿಂದ ಸೂಕ್ಷ್ಮವಾದ,

ಪ್ರಾಮಾಣಿಕವಾದ, ನಿರ್ವಂಚನೆಯ ಅಭಿವ್ಯಕ್ತಿಶಕ್ತಿಗೆ ಶಾಪ ತಟ್ಟಿದೆ. ವ್ಯಕ್ತಿಯ ಮಾನಸಿಕ, ವೈಚಾರಿಕ ದೃಷ್ಟಿ ಬದಲಾಗುವ ತನಕ ಇಂಥ ಗುಂಪಿನ ಗುತ್ತೇದಾರಿಕೆಗೆ ಅಳಿಗಾಲವಿಲ್ಲ.

ಕಾವ್ಯರಚನೆ, ಕಾವ್ಯವಾಚನ—ವ್ಯಕ್ತಿಮಟ್ಟದಲ್ಲಿ ಲವಲೇಶವಾದರೂ ಮಾರ್ಪಾಟನ್ನು, ಸ್ವಕೀಯ ಶೋಧನೆಯನ್ನು ಉಂಟು ಮಾಡೀತೆಂಬ ನನ್ನ ನಂಬಿಕೆಯ ಫಲವೇ ಈ ಕಾವ್ಯಾಭಿವ್ಯಕ್ತಿ. ಇದರಲ್ಲಾದ ಸೋಲಿನ ಹೊಣೆ ನನ್ನದು; ಗೆಲುವಿನ ಲಾಭ—ಕೆಚ್ಚು ಮುಟ್ಟಿಗೆ ಓದಿದವರದು.

—ಶಾಮಸುಂದರ ಬಿದರಕುಂದಿ

## ಮುನ್ನುಡಿ

ಕನ್ನಡ ಕಾವ್ಯ ತನ್ನ ಸಾಮರ್ಥ್ಯವನ್ನೆಲ್ಲ, ಕಳೆದು ಈ ಐದು ದಶಕಗಳಲ್ಲಿ, ಎರಡು ಮೂರು ಪ್ರಾಯೋಗಿಕ ಉಬ್ಬರಗಳಲ್ಲಿ ಪ್ರಕಟಿಸಿಕೊಂಡು ಒಂದು ನಿಲುಗಡೆಗೆ ನಿಂತ ಹೊತ್ತಿನಲ್ಲಿ, ಶಾಮಸುಂದರ ಬಿದರಕುಂದಿ ಯವರಂಥ ಕೆಲವು ವಿಶಿಷ್ಟ ಧ್ವನಿಗಳು, ಹೊಸ ಹುಡುಕಾಟದ ಹೆಜ್ಜೆಗಳಂತೆ ತೋರು ವುದು ಸಮಾಧಾನದ ಸಂಗತಿಯಾಗಿದೆ. ನವೋದಯದ ಸೌಂದರ್ಯ ನಿಷ್ಠೆ, ರಾಷ್ಟ್ರೀಯತೆ, ಆದರ್ಶದ ಹಂಬಲಗಳು; ನವ್ಯಕಾವ್ಯದ ರಭಸ, ವಾಸ್ತವನಿಷ್ಠೆ, ಮಾನವನ ನಿಗೂಢ ಪಾತಾಳ ಪ್ರಪಂಚದ ಅಕರಾಳ—ವಿಕರಾಳಗಳು, ನಾಗ ರಿಕತೆಯ ಗೊಂದಲದ ನಡುವಣ ಅಸ್ವಸ್ಥಗಳು, ವ್ಯಂಗ್ಯ–ವಿಡಂಬನ–ಕಾವ್ಯಗಳ ಸುತ್ತ ಗಿರ್ಕಿ ಹೊಡೆಯುವ ಚಾಪಲ್ಯ- ಈ ಸಾಮಗ್ರಿಗಳನ್ನು ವಿಸರ್ಜಿಸಿ, ಕಾವ್ಯ ಇದೀಗ ವಾಸ್ತವದ ಸಹಜತೆಗಳ ಕಡೆಗೆ ಕಣ್ಣು ಹಾಯಿಸತೊಡಗಿದೆ. ನವ್ಯತೆಯ ರಭಸದಲ್ಲಿ ಅವಿಚಾರಿತವಾಗಿ ಕಣ್ಣು ಮುಚ್ಚಿಕೊಂಡ, ನವೋದಯದ ಎಷ್ಟೋ ಒಳ್ಳೆಯ ಅಂಶಗಳನ್ನು, ತನ್ನೊಳಗೆ ಸಮಾವೇಶ ಮಾಡಿಕೊಳ್ಳಬೇಕೆಂಬ ತಿಳಿವು

ಮೆಲ್ಲನೆ ಮೂಡತೊಡಗಿದೆ. ಭಾಷೆಯ ಬಗ್ಗೆ ಇದ್ದ ಪ್ರಜ್ಞಾಪೂರ್ವಕವಾದ, ತಾಂತ್ರಿಕ ಚಮತ್ಕಾರಗಳು ಹಿಂದೆ ಬಿದ್ದು, ಒತ್ತಿಕೊಂಡು ಬಂದ ಅನುಭವಕ್ಕೆ ಸಹಜವಾದ ಭಾಷೆಯನ್ನು ಬಳಸುವ ಪ್ರಯತ್ನಗಳು ಕಾಣಿಸಿಕೊಳ್ಳತೊಡಗಿವೆ. ಒಟ್ಟಿನಲ್ಲಿ ಕಾವ್ಯ, ತನ್ನ ಕ್ರಿಯಾಶೀಲತೆಗೆ ಯಾವ ಪ್ರತಿ ಪಕ್ಷದ ಅಸ್ತಿತ್ವವನ್ನೂ ಭ್ರಮೆಯನ್ನೂ ಅವಲಂಬಿಸದೆ, ಆದುದರಿಂದಲೇ ಅನಗತ್ಯವಾಗಿ ಸವಾಲಿನ ಧಾಟಿಯನ್ನು ಆರೋಪಿಸಿಕೊಳ್ಳದೇ, ನಿಂತ ನೆಲದ ಮೇಲೆ ಬೇರೂರಿ ತಾನು ಪಡೆದಷ್ಟು ಅನುಭವಗಳನ್ನು ಅರಳಿಸುವ ನಿಸರ್ಗ ಸಹಜವೆಂಬಂಥ ಕ್ರಿಯೆಗೆ ಹಿಂದಿರುಗುತ್ತಿರುವದು, ಈ ಅನ್ವೇಷಣೆಯ ಕಾಲದ ಆರೋಗ್ಯವಂತಿಕೆಯ ಲಕ್ಷಣವಾಗಿದೆ. ಈ ಒಂದು ಲಕ್ಷಣವನ್ನು ಉಳಿಸಿಕೊಳ್ಳುತ್ತ, ಮತ್ತು, ಅನೇಕ ಸ್ವರಗಳ ಅನುಭವಗಳನ್ನು ಒಳಗೊಳುತ್ತ ಖಚಿತವಾದ ದಾರಿಯನ್ನು ಕಂಡು ಕೊಳ್ಳುವುದು ಇಂದಿನ ಕವಿಗಳ ಜವಾಬ್ದಾರಿಯಾಗಿದ. ಶಾಮಸುಂದರ ಬಿದರ ಕುಂದಿಯವರ 'ಈ ಪದ್ಯ ಸಂಕಲನ'ದಲ್ಲಿ ಈ ಒಂದು ಪರಿಸರದ ಕೆಲವು ಲಕ್ಷಣ ಗಳು, ತಕ್ಕ ಮಟ್ಟಿಗೆ ಕಾಣಿಸಿಕೊಂಡಿವೆ ಎನ್ನುವುದು ಒಂದು ವಿಶೇಷ ಸಂಗತಿ ಯಾಗಿದೆ. 'ಅಲ್ಲಮ ಪ್ರಭುವಾದ' 'ನಿನ್ನ ಗುರುತಿಗೆ ನಿನ್ನಮನೆ ವರ್ಣನೆ;' 'ಹುಬ್ಬಳ್ಳಿ: ಮೇ ಹದಿನಾಲ್ಕು' 'ಹೊಗೆ ಮಬ್ಬಿನ ಕಸಿವಿಸಿ'–ಈ ಕೆಲವು ಕವನ ಗಳು ಈ ಮಾತಿಗೆ ದಾಖಲೆಗಳಾಗಿವೆ.*

'ನನಗೆ ನಾನೇನೂ ಆಗಿಲ್ಲದಖಾಲಿತನದನಿಸಿಕೆಯಿಂದ,ಅನುಭವದ ಅನ್ವೇ ಷಣೆಗೆ ಹೊರಟ ಬಿದರಕುಂದಿಯವರ ಕಾವ್ಯ, ಈ 'ಖಾಲಿತನವನ್ನು' ತನ್ನ ವ್ಯಕ್ತಿತ್ವದ ಸಹಜಸ್ಥಿತಿ ಎಂದು ಒಪ್ಪಿಕೊಳ್ಳುತ್ತದೆಯೇ ವಿನಾ, ಅದನ್ನೇ ವೈಭವಿ ಸುವ, ಅಥವಾ ಅದರಿಂದಾಚೆಯ ಮಹಾ ಆದರ್ಶದಲ್ಲಿ ದುಢುಕಿಮ್ಮನೆ ಧುಮು ಕುವುದರಲ್ಲೆ ತನ್ನ ಪೂರ್ಣತೆ ಇದೆ ಎಂದು ಉದ್ಘೋಷಿಸುವ ಹವ್ಯಾಸಕ್ಕೆ ಬೀಳು

* ಈ ಸಂಕಲನದ ಕೆಲವು— 'ಅಲ್ಲಮ ಪ್ರಭುವಾದ', 'ಹೊಗೆಮಬ್ಬಿನ ಕಸಿವಿಸಿ', 'ಇಪ್ಪತ್ತೆಂಟನೆಯ ಸ್ವಾತಂತ್ರ್ಯ ಉತ್ಸವ', 'ನಿನ್ನ ಗುರುತಿಗೆ ನಿನ್ನ ಮನೆ ವರ್ಣನೆ' ಇಂಥ ಕವಿತೆಗಳ ರಚನಾ ವಿನ್ಯಾಸ, ಭಾಷೆಯ ಹಾಸು ಬೀಸು ವಿಶೇಷವಾಗಿ ಗಮನಿಸತಕ್ಕದ್ದಾಗಿ ಬಿದರಕುಂದಿಯವರು ವಿಶಿಷ್ಟಾಭಿವ್ಯಕ್ತಿಯನ್ನು ರೂಪಿಸಿ ಕೊಳ್ಳುತ್ತಿರುವರೆಂಬುದಕ್ಕೆ ಸಾಕ್ಷಿಗಳಾಗಿವೆ.

ವುದಿಲ್ಲ. ನಿಜವಾದ ಕವಿ ತನ್ನ ಮಿತಿಯನ್ನು ಅರಿತು, ಅದರ 'ಅಮಿತ'ವಾದ ದ್ದರ ಕಡೆಗೆ ಹೊರಟು ವಾಸ್ತವವನ್ನು ಒಪ್ಪಿಕೊಳ್ಳುತ್ತಾ, ಎದುರಿಸುತ್ತಾ ಸುತ್ತಣ ಬದುಕಿನ ಕೃತಕ ಮುಖವಾಡಗಳನ್ನು ಕಿತ್ತೆಸೆಯುತ್ತಾ ಬಯಲಿಗೆ ಬಂದು ನಿಲ್ಲುತ್ತಾನೆ. ಆದರೆ ಸುತ್ತ ಕಾಣುವುದೇನು ? ಎಲ್ಲವನ್ನೂ ಮುಕ್ಕಿ ಮೊಗೆಯುವ ದಳ್ಳುರಿ:

ಎಲ್ಲಿ ಹೊತ್ತಿ ದಳ್ಳುರಿ ಘಡ ಘಡ ಹೊಡಕರಿಸಿ
ಕಣ್ಣಲ್ಲಿ ಮೂಗಲ್ಲಿ ಬಾಯಲ್ಲಿ ಹೊಗೆ ತುರುಕಿ
ಕಾಣಿಸುವುದನ್ನೆಲ್ಲ ಕುರುಡು ಮಾಡುವುದೋ
ಅಡಿ, ಹೊಗಳಿ, ನಿಂದಿಸುವುದನ್ನೆಲ್ಲ ದಿಗ್ಬಂಧಿಸುವುದೋ,
ನಿರಾಳ ಉಸಿರೆತ್ತಗೊಡದೆ, ಶ್ವಾಸಕೋಶವ ಅದುಮಿ
ಆಕುಂಚಿಸುವುದೋ

ಇಂಥ ದಳ್ಳುರಿಯ ನಡುವೆ ನಿಂತು ಕವಿ ಬೆಬ್ಬಳಿಸುತ್ತಾ:

'ಎಂದಾದರೂ, ಎಂತಾದರೂ ಹುಟ್ಟೀತೆ
ಶಾಶ್ವತದ, ನೈಜವ್ಯಾಪಕದ, ಸ್ವಚ್ಛ ಮಾನವತೆಯ
ಸಂಯೋಜಿತ ಪುನರ್ ವ್ಯವಸ್ಥೆಯ ಕ್ರಿಯಾಶೀಲತೆಯು' ?

ಎಂಬ ವಿಷಾದದಲ್ಲಿ ನಿಂತು ನಿಡುಸುಯ್ಯುತ್ತಾನೆ. ಈ ಬದುಕನ್ನು ಸರಿ ಪಡಿಸಲೆಂದು ಬರುವ, ಸ್ವಚ್ಛ ಮಾನವತೆಯ ಕ್ರಿಯಾಶೀಲತೆಗಾಗಿ ಬರುವ ಮಹಾ ವ್ಯಕ್ತಿಗಳನ್ನು ಕುರಿತು:

'......ಇಲ್ಲ, ನೀವೊರೆಸಲಾರಿರಿ ಈ ಕಣ್ಣ,
ನೀಗಲಾರಿರಿ ಈ ಬನ್ನ,
ಸವರಲಾರಿರಿ ಈ ಗದ್ದ,
ತೀಡಲಾರಿರಿ ಈ ಬರಹ

'ಇಲ್ಲ ಈ ಬಂಜರದ ಅನಾದಿ-ಅನಂತಗಳ ವಿಸ್ಮೃತಿಯಲ್ಲಿ
ಎಂಥಾ ಕಾಳು ಮೊಳೆತೀತು, ಖಾತ್ರಿಯಿಲ್ಲ.

ತೂಕವಿಲ್ಲದ ಗಲಭೆಗಳ, ತಲೆಯೆ ಇಲ್ಲದ ದೊಂಬಿಗಳ,
ಭಯಗ್ರಸ್ತ ಅಣುಬಾಂಬು ಬೀಜಾಸ್ತ್ರಗಳ ಉತ್ತಿಬಿತ್ತಿ
ಏನ ಬೆಳೆದೀರಿ, ಎಂಥ ಪೈರು;
ಉಂಡೀರಿ ಎಂಥ ಫಲವ?

ಎಂದು ಅಳಲುವ ಈ ಮಾತು, ಜಗತ್ತನ್ನು ತಾನಲ್ಲ, ಯಾರೂ ಸುಧಾರಿಸಲಾರರೆಂಬ ವಾಸ್ತವ ಸತ್ಯವನ್ನು ಮನದಟ್ಟು ಮಾಡಿಕೊಡುತ್ತದೆ. ಆದರೆ ಈ ನಿರಾಶೆ, ಈ ಅಸಹಾಯಕತೆ ಇದೇಕಡೆಯಲ್ಲ : ಈ ಪರಿಸ್ಥಿತಿಯ ನಡುವೆಯೂ—

'..... ಶಕ್ಯವಿದ್ದರೆ ತಡೆ, ಭಾವೋದ್ರೇಕದ ಛಿದ್ರದತ್ತ
ವಿಚ್ಛಿದ್ರವಾಗಿ
ಹರಿಯುವುದು ನಿಲ್ಲಿಸು ಕಟ್ಟುವ ಕೆಲಸ ಸ್ಮೃತಿಗಷ್ಟೇ
ಪರಿಮಿತವಲ್ಲ ವಾಸ್ತವದ ಅನುದಿನದ ಬಡಪೆಟ್ಟಿಗೂ ಪ್ರತಿ-
ತಾಡನ, ಕಂಠಮರ್ದನದ ಆಟಾಟೋಪ ಪ್ರಸ್ತುತದಲಿ
ಅನಿವಾರ್ಯ'

ಎಂಬ ಧೈರ್ಯವನ್ನು ವಿವೇಚನೆಯನ್ನು ಈ ಮನೋಧರ್ಮ ಒಳಗೊಳ್ಳುತ್ತದೆ. ಅಷ್ಟೇ ಅಲ್ಲ, ಸಾತ್ರಣ ಸಾಮಾಜಿಕ ಅನ್ಯಾಯಗಳಿಗೆ ಆಧ್ಯಾತ್ಮಿಕವಾಗಿ ಪರಿಹಾರಗಳನ್ನು ಸೂಚಿಸುವ ಹಂಬಲಕ್ಕೆ ಕೈ ಹಾಕದೆ, ಅಥವಾ ಅವುಗಳನ್ನು ಅಸಹಾಯಕನಾಗಿ ಒಪ್ಪಿಕೊಳ್ಳದೆ, ಅವುಗಳನ್ನು ಬಯಲಿಗೆಳೆಯುವ ರೊಚ್ಚು ಕೆರಳುತ್ತದೆ ಈ ಕವಿತೆಗಳಲ್ಲಿ ಆದುದರಿಂದಲೆ—

ಇಲ್ಲಿವನ, ನೀವು ಖರೆ ಪ್ರಾಮಾಣಿಕರಾಗಿ-
ದ್ದರೆ–ಮುಖನೋಡಿ ಮಣೆಹಾಕಬಾರದು.
ಕೆಂಡ ಮೀಸೆಯ ಬಿಚ್ಚುಗತ್ತಿಯ ಕಣ್ಣಿನ ತೆರೆದ
ಹಾವಿನ ನಾಲಿಗೆಯ–ಈ
ಆಮಿಷಖೋರನ ಚಹರೆಗೆ ನಿರ್ವಿಣ್ಣರಾಗಬಾರದು

ಎಂದು ಧೈರ್ಯವಾಗಿ ವಾಸ್ತವಿಕ ಪರಿಹಾರವನ್ನು ಸೂಚಿಸಲಾಗಿದೆ. ಹಾಗೆಯೆ—

ಯೋಚಿಸು ; ಸುಸೂತ್ರ ಹೊರದಾರಿಗಳ; ವಿಶಾಲ ವಿಸ್ತೃತರಾಜ-
ಬೀದಿಗಳ ಇನ್ನಾದರೂ ಕಟ್ಟು : ಸತ್ಯನ್ಯಾಯದನಡುವೆ-
ಗಟ್ಟಿಸೇತುಬಂಧ'

ಎಂಬ ದಿಟ್ಟ ನಿಲುವಿಗೆ ಬಂದು ನಿಲ್ಲುತ್ತದೆ.

ಈ ಕೆಲವು ನಿಲುವುಗಳಿಂದ ನಿಷ್ಪನ್ನವಾಗುವ ಸಂಗತಿ ಇದು : ಇಲ್ಲಿ ಮುಕ್ತ ಮನಸ್ಸಿನಿಂದ, ವಾಸ್ತವವನ್ನು ಒಪ್ಪಿಕೊಳ್ಳುತ್ತ, ಎದುರಿಸುತ್ತ, ಸಂಘರ್ಷಿಸುತ್ತ ಅಂದಂದಿನನುಭವಗಳನ್ನು ತನ್ನತನದಲ್ಲಿ ಶೋಧಿಸುವ. ಒಂದು ಪ್ರಯತ್ನವಿದೆ. ಸುತ್ತಣ ಬದುಕಿನ 'ದಳ್ಳುರಿ'ಗೆ ಅಳುಕಿದರೂ, ಅಧೈರ್ಯದಿಂದ ಹಿಂದೆಗೆಯುವ ನಿರಾಶೆಯಿಲ್ಲ; ಈ ವಾಸ್ತವದ ಸಾಮಾಜಿಕ ಅನ್ಯಾಯ, ಅಸಮತೆಗಳನ್ನು ಯಾರು ಬಂದರೂ ಸುಧಾರಿಸಲಾರರೆಂಬ ಅರಿವಿದ್ದರೂ, ತನ್ನ ಕೈಲಾದಷ್ಟನ್ನು ತಾನು ಮಾಡಿ ಸತ್ಯ—ನ್ಯಾಯದ ನಡುವೆ ಗಟ್ಟಿಯಾದ ಸೇತುವೆಯನ್ನು ಕಟ್ಟಬೇಕೆಂಬ ಸಂಕಲ್ಪವನ್ನು ಮರೆಯುವದಿಲ್ಲ; ಆದರೆ ಈ ದಿಟ್ಟತನದ ಧೋರಣೆಯಿಂದ ಕವಿ ಎಲ್ಲೂ ಒಬ್ಬ 'ಹೀರೋ' ಆಗದೆ, ಸಾಮಾನ್ಯ ಮನುಷ್ಯನಂತೆ, ಆತ್ಮಪ್ರತ್ಯಯವಿರುವ ಮನುಷ್ಯನಂತೆ ನಿಲ್ಲುತ್ತಾನೆ. ಯಾವ ಒಂದು ಹಂತದಲ್ಲೂ ಅಲ್ಲಲ್ಲಿನ ಕನಸನ್ನೋ, ವಿಷಾದವನ್ನೋ, ನಿರಾಸೆಯನ್ನೋ ರೋಚ್ಚನ್ನೋ ತನ್ನ ವ್ಯಕ್ತಿತ್ವದ ಒಂದು 'ಭಂಗಿ'ಯನ್ನಾಗಿ ಮಾಡಿಕೊಳ್ಳದೆ, ಅವುಗಳನ್ನಲ್ಲಲ್ಲಿಯೆ ತೀವ್ರವಾಗಿ ಪಟ್ಟು, ಮತ್ತೆ ಅದರಿಂದ ಬಿಡಿಸಿಕೊಂಡು ಮುಂದಿನ ಮಜಲಿಗೆ ನಡೆಯುವ ಅಲಿಪ್ತತೆ ಈ ಕವಿತೆಗಳ ಒಂದು ವಿಶೇಷ. ಹೀಗಿರುವದರಿಂದಲೇ ಈ ಕವಿ, ಯಾವ ಒಂದು ನಿಲುವಿಗೂ ಕಟ್ಟುಬೀಳದೆ, ಸಮಗ್ರವಾಗಿ ಬದುಕವನ್ನು ವಿವಿಧ ಆಯಾಮಗಳಿಂದ ನೋಡಲು ಮತ್ತು ಅನುಭವಿಸಲು ಪ್ರಯತ್ನಿ

ಸುವುದು. ಈ ಪ್ರಯತ್ನದಲ್ಲಿ ಬಿದರಕುಂದಿಯವರ ನಾಳಿನ ಕವಿತೆ ಇನ್ನಷ್ಟು ಹೊಸ ನೆಲವನ್ನು ಉತ್ತು ಬಿತ್ತಿ ಬೆಳೆ ತೆಗೆಯುವ ಬಗೆಗೆ ನನಗೆ ಭರವಸೆ ಇದೆ.

ಜಿ. ಎಸ್. ಶಿವರುದ್ರಪ್ಪ

ಈ ದಂಡೆ ಮೇಲಿದ್ದು ಆ ದಂಡೆ ದಿಟ್ಟಿಸುತ
ನೀರ ನಿರಾಳದ ಗಹನ ವರ್ತನ ಪರಿವರ್ತನ
ಪರ್ಯಟನ ಕಾಣುತ್ತ ಕೂಡುವ
ನಾನು ಸಮರ ಕುತೂಹಲಿಯಷ್ಟೇ ಅಪಾಯಕಾರಿ
ಕಣ್ಣಿನಾಳದ ಕರುಳ ಚಿವುಟಿ ರಕ್ತಧಮನಿಯು
ಕಲಕಿ ನಿಶ್ಚಲದ ಮಿದುಳ ಗಡಬಡಿಸಿ
ನೋವಿದೀಡಾಗುವ ಎದೆ ಗುಂಡಿಗೆ ಖಂಡಿತ ಇದಲ್ಲ ?

ಎವೆಯಿಕ್ಕದೆ ನೀರ ನಿರಾಳವ ಬಗಿಯ ಬಲ್ಲೆ
ತಾಸೊತ್ತು ತೇಲಿ ಮುಳುಗುತ ಮಿಂಚಿ ಒದ್ದೆ-
ಬಿಡುಗಣ್ಣಿಂದ ಬೆಳಕು-ಕತ್ತಲೆ-ನೆರಳುಗಳ
ಕಣ್ಣು ಮುಚ್ಚಾಡಬಲ್ಲೆ
ನುಣುಪು ಮೈಯುಳ್ಳ ಚೂರು ಮೀನಿನ ಹಾಗೆ
ದಾಹಗಳ ನೆತ್ತರವನ್ನುಗುತ ಮೊಸಳೆ ಬಾಯ್ತುಂಬ
ನೀರಲದ ಸ್ನೇಹ ನಗೆ ಬೀರಿ
ವಂಚಿಸಬಲೆ

ನಡು ನೀರಲ್ಲಿ ಮಾತ್ರ ಮಂಗ ಮನಸಿನ ಭೋಳೆ
ತನಕ್ಕೆ ಕರುಣಾರಸ ನಿತಾಂತ ದ್ರವಿಸಬಲ್ಲೆ

# ಅಲ್ಲಮ, ಪ್ರಭುವಾದ

ಕಾಮಲತೆ ಬಾಡಿದಾಗ ಬಸವಳಿದ ಅಲ್ಲಮ
ಅನಿಮಿಷಯ್ಯನ ಮೂಕ ಸಾಕ್ಷಿಯಲಿ ಪ್ರಭುವಾದ

ಆ ತನಕ ನಿಗುರಿ ನೀಟಾದ ಹರಯದ ಅನಿಯಂತ್ರಿತ
ಹುಮ್ಮಸ್ಸು ಧಾತು ಪತನ: ಮಣ್ಣು ಕಣಕಣದಲ್ಲಿ ಇಂಗಿ
ಪ್ರಭು ನೆಲದ ಮರೆಯ ನಿಧಾನವಾದ ವಸ್ತು ಲೋಕದಲಿ
ಹೂ ಬಿಟ್ಟ ಬಂಗಾರವಾದ ಶರಣರನುಭಾವದ ಕೊರಳ-
ರುದ್ರಾಕ್ಷಿಯಾದ ಮಿದು ನಡತೆಯಲಿ ಉದಾರ ಚರಿತೆಯ
ಕಾಲ್ಗಡಗವಾದ ಕಾಮಲತೆ ಬಿಗಿತ ಸಡಲಿದ ಅಲ್ಲಮ

ಕಾಮಲತೆ ತೋಳಚಾಚಿ ಎದೆಯ ಬಾಚಿ ಅಲ್ಲಮನ ಮಾಮರಕೆ
ಹಬ್ಬಿ ಮೋಹಕ ಗಂಧ ಗಾಳಿಗೆ ಬಳುಕಿ ಕುಣಿದಾಗಲೂ
ಕೋಗಿಲಾಗಿ ಮದ್ದಳೆಯ ಗಡ ಚಿಕ್ಕುವ ಮೊರತದಲಿ ಇಂಚರವ
ಕೊನರಿಸಿದಾಗಲೂ 'ಅದೂ ಅಲ್ಲ ಇದು ಅಲ್ಲ' ಅಂದವನೆ ಅಲ್ಲ ಎಲ್ಲ
ಗೊಗ್ಗಯ್ಯನ ಪ್ರಸನ್ನವದನದೆದುರು ನೈವೇದ್ಯವಾಗಿ ಕಾಮಲತೆ
ಅಂಗಾಂಗದಲಿ
ರಸ ಒಸರಿ ಅಲ್ಲಮ, ಪ್ರಭುವಾದನಲ್ಲ, ಅದೆ ನೆಲದ ಅಚ್ಚರಿ !

ಹರಯದ ಕಾವು ಜ್ವಲಂತ ಬೆಳಕು :
ಅನುಭಾವದ ಸಂಗ ಸಖಿಗೆ
ಕಾಮಲತೆ ಬೆಳಕ ಮುದ್ದಿಸ ಬಂದು
ಮೈಸುಟ್ಟುಕರಕಾಗುವ ಪತಂಗ ಹುಳವೆ ?
ಹರಯದಲಿ ರಕ್ತಸಿಕ್ತದ ಪ್ರಾಣಕ್ಕೆ
ನೆಲದತ್ತಲೇ ಸೆಳೆತ
ಮಣ್ಣ ವಾಸನೆಯೊಂದೇ ಅದಮ್ಯ
ಲಾಲಸೆಗೆ ಮೂಲ ಕಾರಸ್ಥಾನ

ಕಾಮಿ, ಅಲ್ಲಮನ ಲತೆಯಾಗಿ ಬಿರಿದು ಮೈ ಹಿಂಡಿ-
ದಾಗಲೂ ಅಷ್ಟೆ ಮದ್ದಳೆಯ ತಾಳಕ್ಕೆ ಮೈ ಮರೆಸಿ—
ದಾಗಲೂ ಅಷ್ಟೆ ಉಸಿರಗಟ್ಟುವ ಗಾಢ ಕೇಳಿಯಲಿ ಮೈ
ಮೋಣವಾದಿ ಥಾಳ ದೀಪದುರಿ ಹೊತ್ತಿದಾಗಲೂ ಅಷ್ಟೆ—

ತತ್ಪರತೆಯೆಂದರೆ ಗಾಳಿ ಬೆಳಕಿನ ಆಚೆಗಿನ
ಅಮಾಯಕ ಲೋಕದ ಅಚಿಂತ್ಯ ಗಹನದ
ಸಮಚಿತ್ತದ ಸಮರತಿಯ ಸಾಮರಸ್ಯ

೧೯ ಜೂನ್, ೧೯೭೫

# ಇಪ್ಪತ್ತೆಂಟನೆಯ ಸ್ವಾತಂತ್ರ್ಯ ಉತ್ಸವ

.ಶಕ್ಯವಿದ್ದರೆ ತಡೆ.

ಭಾವೋದ್ರೇಕದ ಛಿದ್ರದತ್ತ ವಿಛಿದ್ರವಾಗಿ ಹರಿಯುವುದ
ನಿಲ್ಲಿಸು. ಕಟ್ಟುವ ಕೆಲಸ ಸ್ಮೃತಿಗಷ್ಟೇ ಪರಿಮಿತವಲ್ಲ.
ವಾಸ್ತವದ, ಅನುದಿನದ, ಬಡಪೆಟ್ಟಿಗೂ, ಪ್ರತಿ—
ತಾಡನ, ಕಂಠಮರ್ದನದ ಆಟಾಟೋಪ ಪ್ರಸ್ತುತದಲಿ
ಅನಿವಾರ್ಯ

ಧಡಪಡಿಸುವ ಈ ಸಪ್ಪಳದಾಚೆ
ಮೂಕ ನಿರ್ಭರ ನಿರ್ಲಿಪ್ತದಾಚೆ
ಅವ್ಯಕ್ತವಿದೆ 'ಏನೊ'. ಖಂಡಿತ ನಿಷ್ಕ್ರಿಯ ಮೌನವೇನಲ್ಲ
ಒಡಲುರಿಯ, ಆತಂಕ ತೆಳ್ಳಂಕಗಳ ವಿಚ್ಛಿದ್ರ ಹಾವಭಾವದ
ಅವಸರವೇನಲ್ಲ. ನಿನ್ನಿನ ಅಸಹಾಯತೆಯ ಗಂಭೀರ—
ಗೋರಿಯ ಮೇಲೆ ನಾಳೆ ಮೊಳೆವ, ಹಸಿರು ಚಿಗಿವ
ಎಳ ಮೊಳಕೆ.

ಮೊದಲು ಮುಳ್ಳು—ಪೊದೆ—ಕಳೆ—ಕಸ: ಪಾರ್ಥೇನಿಯಂ ಪಿಡುಗಿನ
ಆಭಾಸ. ಕೈಮುಟ್ಟಿ ಕಿತ್ತು, ಸುಟ್ಟು ಕರಕಾದಾಗಲೇ ಕಿತ್ತ ಕೈ-
ಸಾರ್ಥಕ. ಸವ್ಯಸಾಚಿಯ ಅವತರಣ ನಿರೀಕ್ಷೆ: ವರ್ತಮಾನದ ಭರವಸೆ?
ಚಿಗಿತ ಎಳೆ ಮೊಳಕೆಗಿಲ್ಲ ಈ ಪಿಡುಗಿನಾಭಾಸ, ಕೊಂಕು—ಕ್ರಿಯಾಹೀನ.

ಮಿಡಿಯಾಗಿ ಕಾಣಿಸಿ ಮೊಗ್ಗೆಯಾಗಿ ಅರಳಿ ಸ್ವಚ್ಛಂದ ತೊನೆಯುವ
ಬಯಕೆ. ಹಣ್ಣಾಗಿ ಕಂಗೊಳಿಸಿ, ನಿವೃತ್ತಿಯಾಗಿ ಉದುರುವ
ಮುಕ್ತಿ ಆಸೆ : ಈ ಮರ—ಬೀಜ; ಬೀಜ—ಮರದಾಟದಲ್ಲೇ
ಇದ್ದೀತು : ಸ್ವಾತಂತ್ರ್ಯ, ಸಂಗ್ರಾಮ, ಕ್ರಾಂತಿ, ಸರ್ವೋದಯಗಳ
ವಿಲಾಸ—ವೈಭವ.

೧೪ ಅಗಸ್ಟ ೧೯೭೫

# ಅಕ್ಕನೊಂದಿಗೆ

ಶಬ್ದಕ್ಕೆ ನಾಚದೇ ಸಂತೆಯಲ್ಲಿದ್ದ
ಮೃಗಗಳಿಗೆ ಅಂಜದೇ ಬೆಟ್ಟದಲ್ಲಿದ್ದ
ನೊರೆ—ತೆರೆಗಳಿಗೆ ಬೆದರದೇ ಸಮುದ್ರ ತಡಿಯಲ್ಲಿ ನಿಂತೆ

ಅಕ್ಕ, ನೀನು ಅಂದಂತೆ ಸ್ತುತಿ, ನಿಂದೆಗಳು ಅಪ್ಪಳಿಸಿದಾಗಲೂ
ಸಮಾಧಾನಿಯಾಗಿದ್ದೆ : ಆಮೆಯಂತೆ—ಹರಿದಾಡದೇ-
ಕಾಲುಗಳನವುಚಿ ಈಸದೇ, ಜೈಸದೇ
ನಿಂತಲ್ಲೇ ಡುಬ್ಬುವ ಗೂರಸು ಮಾಡಿ ಸಹಜ ಉಸಿರನ್ನೇ ತಡೆಹಿಡಿದೆ

ಧ್ಯಾನದಲ್ಲೇಕಾಕಿ
ಮೌನದಲ್ಲೇಕಾಕಿ
ವ್ರತ—ನೇಮದಲ್ಲೂ ಅಷ್ಟೇ-
ನಿನ್ನದೇ ನಿಲುವು : ಏಕ ನಿಷ್ಠೆ

ಅಕ್ಕ, ತಪ್ಪಾಯಿತೇ : ಧೈರ್ಯಕ್ಕೆ—ಮನುಷ್ಯನಾದಿ-ಎದೆ ಒಡ್ಡಿದ್ದು ?
ಮನುಷ್ಯತ್ವಕ್ಕೆ—ಮಾನವೀಯವಾದಿ ಸ್ಪಂದಿಸಿದ್ದು ?
ನಾಳೆ ಹುಟ್ಟುವ ಸತ್ಯದ ಬೆಳಕಿಗೆ ಕಾದು—ಈಗ—
ಕತ್ತಲಲ್ಲಿ ಸೋತಂತೆ ಸತ್ತಂತೆ ಸುಮ್ಮನೆ ಕೂತದ್ದು ?

ತಪ್ಪಾಯಿತಲ್ಲವೆ, ಹೇಳು : ಹೇಗೆ ತಿದ್ದುವುದು ಈಗ?
ಬರೆದದ್ದೆಲ್ಲ ಉಗುಳು ಹಚ್ಚಿ ಗಸಗಸ ಅಳಿಸಿ ಬಿಡಲೆ ?
ಇದು ಪಾಟಿಯಲ್ಲ-ಬಳಪವಲ್ಲ
ಸ್ಥಾವರದ ಶಿಲಾಶಾಸನ
ನೆಲವಿರುವಲ್ಲೆಲ್ಲ ಹೂತು, ತಲೆಬರಹವನ್ನು
ನಿರ್ಣಯಿಸುವ ಉಪದೇಶಪರ ವಚನ

ಅಕ್ಕ, ಇಲ್ಲ. ನೀನು ಸಂತೆಯಲ್ಲಿ ಸುಳಿದಾಡಿದ್ದರೂ
ಏನೊಂದೂ ಕೊಳ್ಳಲಿಲ್ಲ, ಯಾರೊಂದಿಗೂ ಕೊಡಲಿಲ್ಲ
ಏನೂ ಮಾರಲಿಲ್ಲ, ಯಾರಿಗೂ ಮಾರು ಹೋಗಲಿಲ್ಲ
ಬೆಟ್ಟದಲ್ಲೂ ಹಾಗೇ ; ನಿನ್ನ ಹೆಣ್ತನದ ಆಜಂಕ್ಯಕ್ಕೇ ಹೆದರಿ
ಕಣ್ಣು ಬೆಳ್ಳಗೆ ಮಾಡಿದ್ದವು ಆ ಹುಲಿ ಚಿರ್ಚ ಕರಡಿ ವಾನರ ಸೇವೆ
ಸಮುದ್ರ ತಡಿಯ ಉಸುಕಿನ ಹರಳು ಹರಳಿಗೂ
ಬಡಿದಿತ್ತು ನಿನ್ನ ಆಜನ್ಮ ವೈರಾಗ್ಯದ ಅನ್ಯೂನ ವಾಸನೆ

ಸಂತೆಯಲ್ಲೂ ಆಗ ಶಿಸ್ತು ಇತ್ತು
ಬೆಟ್ಟಕ್ಕೂ ಕರುಣೆ ಇತ್ತು
ಸಮುದ್ರ ತಡಿಗೂ ಸಹನೆ ಇತ್ತು
ನಿಂತರೂ ಕುಂತರೂ ಬರಿಮೈ ಗಾಳಿಗೊಡ್ಡಿ ನಾಡು-ಕಾಡಲ್ಲಿ
ಹಾಡೇ ಹಗಲು ನಡೆದಾಡಿದರೂ
ನಿಸರ್ಗದ ಧೈರ್ಯವಿತ್ತು ಗಾಢ ರಕ್ಷೆಯಿತ್ತು
ಅಕ್ಕ, ನಿನ್ನ ಅಂದಿನ ಆ ಸಮಾಧಾನದ ಹೊತ್ತೇ ಬೇರೆ
ಬದುಕನ್ನು ಬಾಳು ಮಾಡ ಹೊರಟ ನಮ್ಮ ಇಂದಿನ ಈ ಗೊತ್ತೇ
ಬೇರೆ.

೨೬ ಜನವರಿ, ೧೯೭೬

## ಹುಬ್ಬಳ್ಳಿ : ಮೇ ಹದಿನಾಲ್ಕು

೧

ಬರುವಿರಿ,
ಬರಬೇಕಾದವರು.
ಅಭ್ಯಾಗತರಲ್ಲ
ಬಂದಿರಾ ? ಬರ್ರಿ. ಸೀದಾ ಒಳ ನಡೆಯಿರಿ. ಹೊರಗಿನವರಲ್ಲ.
ಬಂದೀರಿ — ಸುತ್ತಾಡಿ ಎಷ್ಟು ದೇಶ, ಕೂಡಿಸಿ ಆಗಣಿತ ಕೋಶ,
ಕುಡಿಕುಡಿದು ಏಳು ಕೆರೆ ನೀರು,
ತಣ್ಣಗಾಯಿತೆ, ಉರಿ ಉರಿದ ಕುಕ್ಷಿ ?

ಯಥಾ ಪ್ರಕಾರ — ರೋಷ ಭೀಷಣರಾಗಿ; ಮಾತಿನ ಕಿಡಿಕಿಡಿಯಾಗಿ
ವಿಚಾರದ ನಿಗಿ ನಿಗಿ ಕೆಂಡವಾಗಿ: ಆಚಾರದ ಥಳಥಳ
ಭಂಗಾರವಾಗಿ—
ಏನು ! ಉಡಿ ತುಂಬಿ ಕೆಂಡ ! ಎಲ್ಲಿ ಸುರುವುವಿರಿ,
ತಣ್ಣಗಾರಾದ ಈ ಮಡ್ಡ ತಲೆಗಳಲ್ಲಿ ?
ಚುಟುಗು ಮುಳ್ಳಾಡಿಸುವಿರಿ, ಎಲ್ಲಿ,
ಜಿಡ್ಡುಗಟ್ಟಿದ ಈ ಮೈಗಳಲ್ಲಿ ?
ಕೆಣಕುವಿರಿ, ಎಲ್ಲಿ,
ಈ ಮತಿ ಭ್ರಾಂತ ಹಳಸಲು ಮನಸಿನಲ್ಲಿ ?

೨

ಬರುವಿರಿ. ಇವೆಲ್ಲ ರೋಗಗ್ರಸ್ತಗಳಿಗೆ ಸೂಜಿ ಮದ್ದಿನ ಶಸ್ತ್ರ ಚಿಕಿತ್ಸಗಳ
ನೀಡಿ, ಭವರೋಗ ನಿವಾರಕ ಸಿದ್ಧಪುರುಷನಾಗಲಿಕ್ಕೆ.

ಬರಬೇಕಾದವರು. ಹೊರದಿನವರೇನಲ್ಲ. ಬರ್ರಿ.
ಕೂತು, ಕಾದು, ನೋಡಿರಿ.
ಕಾದು, ಕೂತು ತಲೆ ತುರಿಸಿರಿ.

ಬಂದವರು— ಹೋಗುವಿರಿ.
ಸೀದಾ ಆ ದಿಕ್ಕಿನತ್ತ
ಓಡುವಿರಿ.
ನಿಮ್ಮ ಆ ಬಿಹಾರದತ್ತ:
ಬೌದ್ಧ ವಿಹಾರದತ್ತ; ಏಕಾಂತ ನೋನುವತ್ತ.

೩

ಬೀಹಾರದ ದಳ್ಳುರಿ ಜೀವ ಸಂಕಟದ ಚಿಟಿ ಚಿಟಿ
ಇಲ್ಲಿ, ಖರೇ ನೀವಿಲ್ಲಿ ಆ ಕಾವಿನ ಬೇಗೆ ಹಾಕಿಸಿಕೊಂಡೀರಾ
ಜೇಪಿ ? ಚರ್ಮವು ಹುರುಪಳಿಸಿ, ಬೆಂದೀತೇ ಜೇಪಿ ?

ಏನ ಕಂಡೀರಿ, ಏನ ಕೇಳೀರಿ,
ಹೇಡಿತನದ, ಔದಾಸೀನ್ಯದ, ಗಂಭೀರ–
ಅಸಹಾಯತೆಯ ಏಕ ತಾನದ ಸೊಲ್ಲು ?
ಅವಧರಿಸಿ ಕನಿಕರಿಸುವಿರಾ ಜೇಪಿ,
ಕಣ್ಣೀರೊರೆಸಿ ಮೂಗೊರೆಸಿ ಗದ್ದ ಸವರುವಿರಾ ಜೇಪಿ ?

೪

ಇಲ್ಲ ಜೇಪಿ ಇಲ್ಲ.

ನೀವೊರೆಸಲಾರಿರಿ ಈ ಕಣ್ಣ
ನೀಗಲಾರಿರಿ ಈ ಬನ್ನ
ಸವರಲಾರಿರಿ ಈ ಗದ್ದ
ತೀಡಲಾರಿರಿ ಈ ಬರಹ
ತಿದ್ದಲಾರಿರಿ ಈ ಬವಣೆ.

ಯಾವ ಗಾಂಧಿಯ ಅಸ್ತ್ರ—ಶಸ್ತ್ರ
ಎಲ್ಲಿ ಮೊಂಡಾಯಿತೋ,
ಯಾವ ಮಹಾತ್ಮನ ನೀತಿ ನಿಯತ್ತು
ಎಲ್ಲಿ ಮಣ್ಣಾಯಿತೋ
ಯಾವ ಹುತಾತ್ಮನ ತ್ಯಾಗಬಲಿದಾನ
ಎಲ್ಲಿ ಮರೆಯಾಯಿತೋ

ಅಲ್ಲಿ— ಆ ಬಂಜರಿನಲ್ಲಿ, ಬಿರುಕು ಬಾಯ್ಬಿಟ್ಟ ನೆಲದ ಒಡಲಲ್ಲಿ
ಯಾವ ಬೀಜ ಬಿತ್ತುವಿರಿ ಜೇಪಿ ?
ರಾಶಿ ರಾಶಿ ಕಾಳು-ಜೊಳ್ಳನ್ನು ತೂರಿ ಜರಡೀ ಹಿಡಿದು
ಎಂದು ಹೆಕ್ಕುವಿರಿ ಖರೆಯ ಘಟ್ಟಿ—ಕಾಳುಗಳ ? ಹೇಗೆ-
ಉತ್ತುವಿರಿ ಹರಗಲಾಗದ ಈ ಬಿರುಸು ಹೊಲದ
ಎದೆಯಲ್ಲಿ ?

೫

ಇಲ್ಲ. ಈ ಬಂಜರದ ಅನಾದಿ—ಅನಂತಗಳ ವಿಸ್ಮೃತಿಯಲ್ಲಿ
ಎಂಥಾ ಕಾಳು, ಯಾವಾಗ ಮೊಳೆತೀತು ಖಾತ್ರಿಯಿಲ್ಲ.
ತೂಕವಿಲ್ಲದ ಗಲಭೆಗಳ, ತಲೆಯೆ ಇಲ್ಲದ ದೊಂಬಿಗಳ
ಭಯಗ್ರಸ್ತ ಅಣುಬಾಂಬು ಬೀಜಾಸ್ತ್ರಗಳ ಉತ್ತಿ-ಬಿತ್ತಿ
ಏನ ಬೆಳೆದೀರಿ ಎಂಥ ಪೈರು
ಉಂಡೀರಿ ಎಂಥ ಫಲವ—

ಇಲ್ಲಿ, ಈ ಬಂಜರದಲ್ಲಿ ವಿಶ್ವಾಸ ಲೋಪದ ಗಹನ ಪೊಳ್ಳಿನಲ್ಲಿ
ಆಕಾಶ ಕಳಚಿದ ಲೋಕದಲ್ಲಿ ?

೬

ಬರುವಿರಿ. ಹೆಜ್ಜೆ ಇಕ್ಕುತ್ತಿರುವಿರಿ.
ಬರಿ, ಎಲ್ಲಾ ಕಡೆಗೂ ಬಂದಂತೆ—
ಬಂದಂತೆ ಹಾಗೂ ಮತ್ತೆ ಹೋದಂತೆ.

ಹಣಿಕುವಿರಿ. ಎಚ್ಚರವ ಕೆಣಕುವಿರಿ ತಿಣುಕಲು
ಮಾತ್ರ ಹಚ್ಚದೆ ಸಂಕಲ್ಪಗಳ ನಮ್ಮ ದೀಪ—
ಪ್ರಜ್ವಲಿಸಗೊಡದೆ.

ಹೋಗುವಿರಿ.
ಹಿಂತಿರುಗುವಿರಿ.
ನಿಮ್ಮ ಆ ಬೀಹಾರದತ್ತ :
ಬೌದ್ಧ ವಿಹಾರವತ್ತ :
ಏಕಾಂತ ನೋನುವತ್ತ.

೧೪ ಮೇ ೧೯೭೫

## ಹೊಗೆ ಮಬ್ಬಿನ ಕಸಿವಿಸಿ

ಎಲ್ಲಿ ದಳ್ಳುರಿ ಹೊತ್ತಿ ಧಡಫರ ಹೊಡಕರಿಸಿ
ಕಣ್ಣಲ್ಲಿ ಮೂಗಲ್ಲಿ ಬಾಯಲ್ಲಿ ಹೊಗೆ ತುರುಕಿ
ಕಾಣಿಸುವುದನ್ನೆಲ್ಲ ಕುರುಡು ಮಾಡುವುದೋ—
ಆಡಿ, ಹೊಗಳಿ, ನೇರ್ಪಡಿಸಿವುದನ್ನೆಲ್ಲ ದಿಗ್‌ಬಂಧಿಸುವುದೋ
ನಿರಾಳ ಉಸಿರೆತ್ತಗೊಡದೇ ಶ್ವಾಸಕೋಶವ ಅದುಮಿ
ಆಕುಂಚಿಸುವುದೋ, ಅಲ್ಲಿ,
ಗೆಳೆಯನೆ, ಸಾಶಂಕಿತ ದೃಷ್ಟಿ ಚದುರುವ ನೆರೆಯುವನೆ,
ಈ ಕಂಡಾಪಟ್ಟೆ ಆಗು—ಹೋಗುಗಳ, ಕುತ್ತು ಸಿರ ಭಾರಗಳ
ಹಗುರ ತೇಲಿಸಿ ಒತ್ತರಿಸಿ ಇಕ್ಕಟ್ಟಾದ ಹಾದಿಬೀದಿಗಳ
ರಾಜಮಾರ್ಗಕ್ಕೇ ಅಪಮಾರ್ಗ ಕಲ್ಪಿಸುವ, ನಮ್ಮೆಲ್ಲರ
ವಿಶೃಂಖಲ ಪ್ರಭುವೆ, ಭುಗಿಲೆದ್ದಿರುವ ಈ ದಳ್ಳುರಿಯ
ಕೆಂಡ ಬಿಸಿ, ಹೊಗೆ ಮಬ್ಬಿನ ಕಸಿವಿಸಿ,
ನಿನ್ನ ಪರನರದಲ್ಲೂ, ಸವೆಸವೆದ ಹಳೆ ಎಲುಬಿನಲ್ಲೂ
ಬಾತು ಬೀಗಿದ ಪ್ಮ್ಯ ಕೊಬ್ಬಿನಲ್ಲೂ ದಶಕಗಳ
ನಿರಂತರ ನಿಷ್ಕ್ರಿಯತೆಯ ತಣ್ಣಗಿನ ರಕ್ತ ಸಂಚಲನದಲ್ಲೂ

ಎಂದಾದರೂ—ಎಂತಾದರೂ-ಹುಟ್ಟಿಸೀತೇ,
ಶಾಶ್ವತದ, ನೈಜ ವ್ಯಾಪಕದ, ಸ್ವಚ್ಛ ಮಾನವತೆಯ
ಸಂಯೋಜಿತ ಪುನರ್‌ವ್ಯವಸ್ಥೆಯ ಕ್ರಿಯಾಶೀಲತೆಯ ?

೨

ಸ್ವಂತ ಉಸಿರಿದ್ದರೆ ಉಸಿರಾಡು ಬಾ ಹೊರಗೆ.
ಇನ್ನೊಬ್ಬರಿಗೂ ನಿರಾಳ ಉಸಿರಾಡ ಗೊಡು ಹಗುರ.
ಉಂಡ ಅನ್ನ ಮೃಗ್ಲತ್ತುವಂತೆ ಮೂವತ್ತೆರಡು ಸಲ
ನುರಿಸಗೊಡು : ಪಚನಕ್ಕೆ ಹಾದಿ ಮಾಡು.
ಇನ್ನೊಬ್ಬರ ಹೊಟ್ಟೆ ಕಡಿತಕ್ಕೂ ಸುಲಭ ಮದ್ದು ನೀಡು.

೩

ಈ ಘಡ ಘಡಿಸುವ ದಳ್ಳುರಿ, ನನ್ನ, ಇವನ
ಅವರ, ಸುತ್ತ ಮುತ್ತಿರುವ ಎಲ್ಲರನ್ನಾವರಿಸಿ
ಹೊಡಕರಿಸಿ, ಕಣ್ಣಲ್ಲಿ ಮೂಗಲ್ಲಿ ಬಾಯಲ್ಲಿ ಹೊಗೆಯಿಡುತ್ತ
ಕ್ರಮೇಣ—ನಿನ್ನನ್ನೂ ಕರಕಾಗಿಸುವ ಮೊದಲೇ,
ಪ್ರಭುವೆ, ಭಯಾನಕ ಹೊತ್ತಿನ ಕಾರಣ ಪುರುಷನೆ,
ನಿರ್ಮಿಸು: ಸುಸೂತ್ರ ಹೊರದಾರಿಗಳ; ಸುವಿಶಾಲ-ವಿಸ್ತೃತ ರಾಜ-
ಬೀದಿಗಳ : ಇನ್ನಾದರೂ ಕಟ್ಟು : ಸತ್ಯ-ನ್ಯಾಯದ ನಡುವೆ
ಗಟ್ಟಿ ಸೇತು—ಬಂಧ

೧೮ ಸಪ್ಟೆಂಬರ್ ೧೯೭೫

# ವಿವೇಕ

ತೊತ್ತಳದುಳಿತಕ್ಕೆ ಸಿಕ್ಕು ನಳನಳಿಸುವ
ಹಸಿರು ದಂಟೆಲ್ಲ ಕ್ಷಣದಲ್ಲೇ ಚೂರು ಚಿಪ್ಪಾಡಿ.

ಹಾಲು ಭರಪೂರ ಹಿಂಡುವ ಆವಿಲ್ಲ ದವಸ-
ಧಾನ್ಯದ ಬಾನ ತುಂಬುವ ಮುಸುರೆ-ಕೊಳು.

ಎಕರೆಗಟ್ಟಲೆ ನೆಲವ ಉಳುತ್ತ, ರೆಂಟೆ-ಕುಂಟೆಯು
ನೊಗ ಭಾರ ಎಳೆವ ಎತ್ತಿಗೆಲ್ಲಿದೆ ಪೆಂಡಿ ಪೆಂಡಿ ಕಣಿಕೆ ?

ಹನಿಬೆವರ ಹರಿಸದೇ ತೇಕಿ-ದಣಿದು ಬಾಯಿನೊರೆ-
ಉಕ್ಕಿಸದೆ ನಿರಂತರ ನೊಗಭಾರಕ್ಕೆ ಕುತ್ತಿಗೆ ಒಡ್ಡಿ ದಡ್ಡು ಬಿದ್ದ
ಭಲೆ ಬಸವ ಜೋಡಿದಿಲ್ಲ ಉತ್ಸಾಹ-ಹುನ್ನಾರಿನ
ಕೇಕೆ—ಕಲರವದ ಪ್ರೋತ್ಸಾಹ.

ಕೊಟ್ಟಿಗೆ ತುಂಬ ಮಾತ್ರ ಎಮ್ಮೆ ಕುರಿ, ಕೋಣ
ಮುಡಸು ತಲೆಗಳದೇ ಹಿಂಡು-ದಂಡು.

ಕನಸು ಕಲ್ಪನೆಗೆಲ್ಲ ಕೊಳ್ಳೀಹಚ್ಚಿ, ಲಗು ಲಗೂ, ಹಗುರ
ದಕ್ಕುವ ಆಸೆ—ದುರಾಸೆಯ ಛಿದ್ರ ಚಿಪ್ಪಾಡಿಯು
ದುರ್ನಾತದ ಬಾಯಲ್ಲಿ ತಾಸುಗಟ್ಟಲೆ ನುರಿಸಿ,
ನಿಧಾನ ಕಮರು ತೇಗುವ, ಅರದಿಸಿ-ಕರಗಿಸಿ
ಬೊಜ್ಜು—ಕೊಬ್ಬುಗಳ ಭಾರದಲಿ ಮೈ ಜೋಲಿ ಹೊಡೆಯುವ
ಎಬಡ ಎಮ್ಮೆಗಳ, ಎಬ್ಬಂಕ ಕೋಣಗಳ, ಧಡ್ಡ ಕುರಿಗಳದೇ
ಸಂತೆ.
ಇವಕ್ಕೋ, ಸಾಯುವ ಮಟ ಹೊಟ್ಟೆ ಹೊರೆಯುವುದೇ ಚಿಂತೆ.

ಸತ್ತ ಮೌನದ, ದರಿದ್ರ ಆಲಸ್ಯದ ನಡುವೆ,
ಅವಕ್ಕೋ! ಅಡ್ಡಪಲ್ಲಕ್ಕಿಯು, ಗಿಡ್ಡ ಆಕಾಂಕ್ಷೆಯು ಹುಂಬ
ವಿಭ್ರಮದ ಸಂಭ್ರಮ.

ಪ್ರಸಕ್ತದ ವಿಷಯ ವಿಪರ್ಯಾಸ ತಾತ್ಕಾಲಿಕ
ಹುಟ್ಟೇಹುಟ್ಟುವದೊಂದು ವ್ಯವಸ್ಥೆ ಸಾರ್ವಕಾಲಿಕ
ಆ ವರೆಗೂ ನಿಧಾನ ಉಳುತ್ತ, ಕುತ್ತಿಗೆಯೊಡ್ಡಿ ನೋವ ಸಹಿಸುತ್ತ
ಗಟ್ಟಿ ಮುಟ್ಟು ಬೀಜ ಬಿತ್ತುವುದೇ;
ಸಮೃದ್ಧ ಹಾಲು ಕರೆಯದಿದ್ದರೂ ಕರೆದಷ್ಟು ನೊರೆಯಿಂದ
ಶುದ್ಧ ಹಾಲು ಪೂರೈಸುವುದೇ—ಪ್ರಕೃತದಲಿ :

ಎತ್ತು—ಆವು ಪಾಲಿಸ ಬೇಕಾದ ವಿವೇಕ—ಧರ್ಮ.

೩೧ ಡಿಶೆಂಬರ್ ೧೯೭೫

# ದುಡಿಮೆಯವರು

ಹೊಂಟಾರ ಜನ ಎದ್ದು ದುಡಿಯಾಕ ।
ಮಣ್ಣಾಗ ಮೈ ಮುರಿದು ಗಳಿಸಾಕ ।
ಕೆಸರಾಗ ಅಡೀಸಿ ಕೈಯ । ಕಂಡವರ ।
ಹೊಲದಾಗ ಸುರಸುತ್ತ ಮೈ ಬೆವರ ॥ ೧

ಗುಳಿಯೆದ್ದ ಹೊಂಟಾರೊ ಮನಿ ಮಾರು ಬಿಟ್ಟು ।
ದುಡಿಮೀಯ ಗಂಡನ್ನ ಹುಡುಕುತ್ತ ।
ಹಾಗಿದಿಲ್ಲ ನಿಲ್ಲ್ವನ ಹುಡುಕಾಟ । ಎಂದೆಂದೂ ।
ಸಾಗಿಲ್ಲ ಈ ಒಗೆತ್ವನ ಪೂರಾ ನಿಶ್ಚಿಂತ ೨

ಬಿಸಲೀಗೆ ಬಿರದೈತಿ ನೆಲದ್ಹಾಂಗ ಈ ಮೈ ।
ನೆಂದೈತಿ ಮಳಿಯಾಗ ತೊಯ್ದು ತಪ್ಪಡಿಯಾಗಿ
ಥಂಡ್ಯಾಗ ನಡಗೈತಿ ಗದಗ್ವದಾ । ಭರ್ರಂತ ।
ಗಾಳೀಗೆ ಕುಸಿಬಿದ್ದೈತಿ ಇವರ ಬಾಳೀವು ॥ ೩

ಹಾಸ್ಕಾರ ಕಂಬಳಿಯ ಮ್ಯಾಲೊಂದು ಕಂಬ್ಳಿ ।
ಮ್ಯಾಲೆ ಮಲಗ್ಯಾರ ತಾವೂ ಕಂಬ್ಳೀ ಹಂಗ ।
ನಡನಡನೆ ನಡಗ್ಯಾರ ಥಂಡ್ಯಾಗ । ಮೈಯೆಲ್ಲಾ ।
ಎದ್ದಾವ ಕಂಬ್ಳಿ ಹುಳದಂಥಾ ಮುಳ್ಳು । ೪

ಎಂದೋ, ಯಾರೋ, ಮುಚ್ಚಿದ ಬಾಯಿ ತಗದಿಲ್ಲ ।
ಇವರ ನಾಲಿಗಿ ಹ್ಯಾಂಗೈತಿ ? ನಾ ನೋಡಿಲ್ಲ ।
ದವಡ್ಯಾಗ ಮುರಸುತ್ತ ಒಣಗಿದ ರೊಟ್ಟಿ । ತುಂಬ್ಯಾರ
ತಮ್ಮ ತುತ್ತಿನ ಚೀಲ ಇನ್ಯಾರೂ ಕಸಗೊಳ್ಳಧಾಂಗ ॥ ೫

೧ ಮೇ, ೧೯೭೬

ಅಲ್ಲಮ ಪ್ರಭುವಾದ........೩೨

ಹುಡುಕುವುದು ಒಂದಾದರೆ ಸಿಕ್ಕುವವು
ಹಲವು—
ನಿಜದ ಲೆಕ್ಕದಲಿ ಹೀಗೇಕೋ ತಪ್ಪುಗಂಟು ?
ಗಣಿತವಾಗಿದ್ದರೆ ಮನಸು, ಲೆಕ್ಕ ಸುಲಭ
ತರ್ಕದ ತಹಬಂದಿಯಲ್ಲಿದು ಕಾಡ ಕುದುರೆ
ಕಟ್ಟಿ ಹಾಕಿದರೆಂಥ ಕವಿತ !
(ಕೋಡಿಲ್ಲ ಪುಣ್ಯಕ್ಕೆ, ಇಲ್ಲ ತಿವಿತ !)
ಬಿಟ್ಟರದೋ ನಾಚಿ ಬೆದರಿ ನಾಗಾಲೋಟ
ಖುರಪುಟದ ಕರ್ಕಶ ಸಪ್ಪಳವು ಕೂಡ
ಆ ಕ್ಷಣಕೆ ರಮ್ಯ ಮಂಜುಳ ನಿನಾದ !

# ಫಲಿತಾಂಶ

ಈದೀಗ
ನನಗೆ ನಾನೇನೂ ಆಗಿಲ್ಲದ ಖಾಲಿತನದ
ಅನಿಸಿಕೆ
ಇಳಿಹೊತ್ತು ತೆಳುನೆರಳು ಹೊಸ್ತಿಲದಾಟಿ
ಕವಿದಂತೆ
ತಿಳುವಳಿಕೆ ಕಿಡಕಿ—ಬಾಗಿಲು ನೂಕಿ
ಉದ್ದಕ್ಕೆ
ಹೆಣವಾಗಿ ಮೈ ಆಡರಿದಂತೆ ಭಾಸ

ಮುಸುಕು ಸರಿಸಿ ಕಣ್ಣಲ್ಲಿ, ಕಣ್ಣ ಮಂಜಲ್ಲಿ
ಗಂಟಲು ಬಿಕ್ಕಳಿಕೆಯಲ್ಲಿ ಹದಿನಾಲ್ಕರ
ಹುಡುಗುತನ ಕಳೆದ ಅರೆ ಮುದುಕತನದ
ಒಣನೆನಪು
ಸತ್ತ ಬಾಲ್ಯಕ್ಕಾಗಿ, ಬತ್ತಿದ ಲವಲವಿಕೆಗಾಗಿ
ಹಳವಂಡಗಳ ದಾಳಿ : ಮನಸ ಮಗ್ಗುಲ ಮುರಿತ

ಆದೀಗ
ಸೂರ್ಯನೇ ಕಣ್ ತೆಗೆಯಲಿ ಚಂದ್ರನೆ ಹಲ್
ಕಿಸಿಯಲಿ ಹದಿನಾರರ ಏರಿನಲ್ಲಿ ಕೈಬಿಟ್ಟು
ಇಳಿಜಾರದಲ್ಲಿ
ಸೈಕಲ್ಲು ಹೊಡೆವ ರೋಮಾಂಚನ

### ಇಪ್ಪತ್ತೆರಡರಡರ ಒಡಕು

ಕನ್ನಡಿಯಲ್ಲಿ ಮರೆವುಗಳನೊಂದೊಂದೇ ಮುದು-
ಮುದುಡಿಯಾಗಿ ಕೂದಲೊಂದೇ ಉದು—
ರುದುರಿ ನೆನಪೆಲ್ಲ ಸವುಕಲಾಗಿ ಧೂಳಿನಲಿ
ಮುಚ್ಚಿ ಮುಖವೇ ಸೊರಗಿ

### ಇಪ್ಪತ್ತೈದರ ಅಪ—

ಸಿದ್ಧಿಗಳ ಬೇರೀಜು ಲೆಕ್ಕ ತಪ್ಪಿ ಬರೆಯುವಂತಿಲ್ಲ
ಸ್ವಂತ ಮಾತಿನ ಅಂಕಿಗಳೇ ಮರೆತಂತೆ ಅಭಿ—
ನಯಿಸಬೇಕೆಂದರೆ

### ಇಪ್ಪತ್ತಾರರ ಪರದೆ

ಅನಾಯಾಸ ಸುತ್ತಿ ಮೇಲೆದ್ದು, ಥರ ಥರ
ನಡುಗಿಸುತ್ತದೆ ಕನಸುಗಳ ಸ್ವಂತ ಗುಂಗಿನಲ್ಲಿ
ಪರಕೀಯತೆಯು ಆ ಏಂಗಿನಲ್ಲಿ

ಕಳಚಲಾಗದ ಮುಖವಾಡಗಳ ಸಹಿತ
ದಿವ್ಯಾಡಂಬರದೆ ಭವ್ಯ ಸೋಗಿನಲಿ ನಟ—
ಸಾರ್ವಭೌಮತೆಯು ಮೆರೆಯಲು ತೆರೆಯನಿಬ್ಭಾಗಿಸಿದರೆ

ಪಾತ್ರದ ಗಿಳಿಮಾತು ಪುಟ್ಟಪೂರಾ ಮರೆತು
ಅಟ್ಟದ ತುಂಬೆಲ್ಲ ಏನೂ ಆಡಲಾರದವನ
ಎಲುಬು ಧಿಮಿ ಧಿಮಿ ಧಿಮಿ ಕುಣಿತ

ಈಗ ಅಲೆಗಳ ಅಬ್ಬರದಲ್ಲಿ ಅವಮಾನದ
ಬಿರುಗಾಳಿಯಲ್ಲಿ ಹೆದರಿಕೆಯ
ಥಂಡಿಯಲ್ಲಿ ಅಸಹಾಯತೆಯ
ಗಪ್ಪುಗಾರಿನಲ್ಲಿ, ಅಂಗಾಂಗಗಳವೊಂದೊಂದೇ

ಕಳಚುವ
ಕಳಚಿದ
ಅರ್ಥಮರ್ಥ ಕಟ್ಟಿ ಬಿಟ್ಟ ಹೊಸ-
ಮನೆಯ ಬೆದರುಗೊಂಬಿ ನಾನು

ಖಾಲಿಯಾಗಿ ಉಳಿದವನು
ಖಾಲಿಯಾಗೇ ಉಳಿಯುವವನು

೧೬ ಆಗಷ್ಟ್, ೧೯೭೩

# ಅಂದಿನ ನೆನಪು : ಇಂದಿನ ಕಾಳಜಿ

ಸಣ್ಣಂದಿನ ಗಾಂವಠೀ ಸಾಲಿ ನೆನಪಾಗುತ್ತದೆ.
ಮಾಸಿದ ಟೊಪ್ಪಿಗೆ, ಅಂಚಲ್ಲಿ ಸರಿಸುಮಾರು ತೂತಿರುವ
ಮಾಸ್ತರರ ಧೋತರ; ತುದಿಯಲ್ಲಿ ಸಿಬಿರಿರುವ ಉದ್ದನೆಯ
ಬೆತ್ತದ; ಬೆತ್ತ ಮರೆಯಾದಾಗ ಆಗುವ ಕಪಾಳ ಮೋಕ್ಷದ
ಚುರುಚುರು ನೆನಪು—
ಇವತ್ತು ಮಾಸ್ತರನಾದ ನನ್ನ ಹಳಹಳಿಸ ಹಚ್ಚುತ್ತದೆ

ದಿನ ಮುಂಜಾನೆ-ತಾಸರ್ಧ ತಾಸು ಪ್ರಾರ್ಥನೆಯ ದಿವ್ಯ
ನೆವದಲ್ಲಿ ಗಂಟಲ ಶೋಷಣೆ, ಸ್ವಚ್ಛತಾ ಪರಿಶೀಲನೆ
ಮನ ಮನೆ ಶಾಲೆ ಎಲ್ಲಾ ಶುದ್ಧವಿರಬೇಕೆಂಬ ಮಾಸ್ತರರ
ಪುಂಖಾನುಪುಂಖ ಉಪದೇಶ: ಹಲ್ಲು, ಸಾಲೆಯ ಅಂಗಳ ಹೊಲ-
ಸಾದರೆ ಅಂಗೈಗೆ ಚಡಿಯೇಟು

ಗಾಂಧೀ ಅಜ್ಜ ಹುಟ್ಟಿದ ದಿನ ಹರಿಜನಕೇರಿಯ ವಿಶೇಷ ಸ್ವಚ್ಛತೆ
ಸಾಲುಸಾಲಾಗಿ ಹುಡುಗರ ಪ್ರಭಾತ ಫೇರಿ
ಪಗಶೀ ಕೂಡ ಗೋವಿಂದ ನಾನು
ವರ್ಗದ ಹಿರೇಮಣಿಗೆ ಹೆದರಿ ಗುಸುಗುಸು ಮಾತು—
ಚೇಷ್ಟೆ, ಸಹಪಾಠಿಯೊಂದಿಗೆ ಕಾಲುಕೆದರಿ ಜಗಳ
ಹೊಡೆದಾಟ ಸುರುವಾಗುವ ಹೊತ್ತಿಗೆ ನೆತ್ತಿ ಮೇಲೆ ಧ್ವಜ—
ವಂದನೆ- ಮಂತ್ರಿ-ಮಾಗಧರ ಘನ ಅಧ್ಯಕ್ಷತೆ;
ಗಾಂಧೀ ಮಹಾರಾಜನ ಪುಣ್ಯ ಕಥನ ಶ್ರವಣ
ಮಾಸ್ತರರ ಮುಖಚರ್ಯೆಯಲ್ಲಿ ಅಪರೂಪದ ಮೌನ-ಗಾಂಭೀರ್ಯ

ಅಲ್ಲಮ ಪ್ರಭುವಾದ.......ಖಿಲ

ನಮಗೆ, ಹುಡುಗರ ಗುಂಪಿಗೆ ತಲೆ ಕೆಡವುದೊಂದೇ ಬಾಕಿ
ಸತ್ಯ ನ್ಯಾಯ ಅಹಿಂಸೆಯ ಪಾಠ–ಹೇಗೆ ಕಲಿಯಬೇಕು
ಇಂಥಾ ಉತ್ಸವದ ಉತ್ಸಾಹದಲ್ಲಿ ?
ಚೋಟುಕಿಸೆ ಕೂಡ ಭರ್ತಿ ಮಾಡದ ಇವರ ಮುಂಡಕ್ಕಿ
ರಕರಕ ಹಸಿದು ಹೈರಾಣಾದ ನಮ್ಮ ಹೊಟ್ಟೆಗಳ ತುಂಬೀತು ಹೇಗೆ?
ಸಾಲು ಸಾಲಾಗಿ ನಿಲ್ಲಿಸಿ ಶಿಸ್ತಿಂದ ತಲೆ ತಲೆಗೂ ಹಂಚಿದರೆ ಸರಿ,
ನನ್ನಂಥ ಅಳುಬುರುಕನ ತನಕವೂ ಗಾಂಧೀ ಪ್ರಸಾದ.
'ಹುರ್ರೇ' ಹಿಂಡಿನಲ್ಲಿ ಕಸುವೆಲ್ಲ ಬಯಲಿಗೆಳೆದವನೆ ಮುಂದು.
ಹಂಚಿದ್ದೆಲ್ಲ ಅವನ ಪಾಲು
ನನ್ನ ಬಾಯಿಂದ ಬರಿ ಬೈಗಳು.

ಬೆತ್ತದ ಕಡುಬಿನ ರುಚಿಯನ್ನು ಇಲ್ಲಿ, ಇಂಥಲ್ಲಿ ಮಾಸ್ತರರು
ಉಣಿಸುವುದೇ ಇಲ್ಲ. ಶಿಸ್ತುಗಿಸ್ತಿನ ಗಸ್ತು ಹೊಡೆಯುವುದೇ
ಇಲ್ಲ. 'ಕಸುವೇ ಅಹಿಂಸೆಯ ಮೊದಲನೇ ಪಾಠ' ಎಂದೇ
ಕಲಿಸ್ಯಾರು–ನಾಳೆಯೇ ಒಂದು ಗದ್ಯ. ಕಂಠಪಾಠ ತಪ್ಪಿದರೆ.
ಎತ್ಯಾರು ತಮ್ಮ ಬೆತ್ತ ನಮ್ಮ ಎಳೆಯ ನೆತ್ತಿಯ ಮೇಲೆ.

ಈಗ ಮಾಸ್ತರನಾದ ನಾನು ಗಾಂಧೀ ಶಾಲೆಯ ಈ ರಗಳೆ
ಮರೆಯುವಂತಿಲ್ಲ
ಬೆತ್ತ, ಚಡಿ, ಇಲ್ಲವೇ ಮುಷ್ಟಿಯ ಬಲವಿಲ್ಲದ ನಿಶ್ಯಸ್ತ್ರನಾದ
ನಾನು, ಬರೇ ಕಸುವಿರುವ ಬರೇ ಹಿಂಸೆಯ ಹುಮ್ಮಸ್ಸ
ತುಳುಕಿಸುವ ನನ್ನ ಹುಡುಗರ ಎದುರು ಯಾರ ಎಂಥಾ
ಉಪದೇಶ ಒದರಿ, ಗಾಂಧೀ ಪಾಠ ಖರೆ ಮಾಡಲಿ ?
ನನ್ನ ಖರೆತನ ನಾ ಮರೆಯಲಿ ?
ಸಣ್ಣಂದಿನ ಗಾಂಧೀ ಸಾಲಿ ಮತ್ತೆ ನೆನಪಾಗುತ್ತದೆ
ತಿಳುವಳಿಕೆ ಮಂಜಾಗುತ್ತದೆ.

೮ ಡಿಶಂಬರ, ೧೯೭೩

# ಸಪ್ಟೆಂಬರದ ಬಿಸಿಲು

ಯಾಕೋ ಸಹಿಸಲಿಕ್ಕಾಗದ ಸಪ್ಟೆಂಬರದ ಬಿಸಿಲು
ಕಿಟಕಿ ಕಾಜನ್ನು ತೂರಿ ತೊಗಲ ರಂಧ್ರವ ಸೀಳಿ
ನೀಳ ಮೈ ಕಾಸುತ್ತದೆ. ಸಾವಕಾಶ.
ಚಿಂತೆ ಕಿಕ್ಕಿರಿಯುವ ತಲೆಯು ಬಿಸಿ;
ಸೆಖೆ ದಟ್ಟೈಸುವ ಹವೆಯು ಬಿಸಿ;
ನಿದ್ದೆ ಬಾರದೆ ಮಗ್ಗುಲ ಬದಲಿಸುವ
ಆಕಳಿಕೆ ಬಿಸಿ

ಕವಿತೆಯು ಕರೆದು ಮರೆವು ಬೂದಿಯು ಕೆದರಿ
ನೆನಪ ಕೆಂಡವನೂದುತ್ತವೆ,

ಹರಿತ ಯೋಚನೆ ಎಣ್ಣೆ ಕರಗಿ
ಮಿದುಳ ಹಾಳೆಯ ಮೇಲೆ ಹನಿ
ಬಿದ್ದು ಸುಮಾರು ಅಗಲ ಹಬ್ಬು-
ತ್ತದೆ ಅಪ್ಪಿತಪ್ಪಿ ನಿದ್ದೆ ಆಡರಿದರೆ:
ಭೂತಾಕಾರದ ಅಕ್ಷರ, ಕವಿತೆ ರೂಪಾಗಿ ಕಾಡುತ್ತದೆ.
ಸಪ್ಟೆಂಬರದ ಹಗಲಿಗೆ ಸಂತೆವಕ ಸೊಕ್ಕಿನ ಅಮಲು
ಮಧ್ಯಾಹ್ನದ ನೀರವದಲ್ಲಿ, ಅಪ-
ರೂಪದ ಏಕಾಂತದಲ್ಲಿ ಹೊದಿಕೆ-
ಹೊದ್ದುವ ಆತ್ಮೀಯ ಹಕ್ಕು ಕಸಿ-
ಯುತ್ತದೆ: ಬಿಸಿ ಉಗುವ ತುಟಿಯಿಂದ
ಮುತ್ತೊತ್ತಿ ಜಪ್ಪಿಸಿ ಕೂತ ನಮ್ಮ ಪ್ರೇಮವ
ಭಂಗಿಸುತ್ತದೆ; ಪುಲಕಿತ ಕ್ಷಣಗಳ
ಪ್ರಕ್ಷೋಭಿಸುತ್ತದೆ; ಬೆವರಿನ ಮೋಕ್ಷ-
ಕ್ಕೆ ಎಳಸುತ್ತದೆ ಮೈಯಲ್ಲಿ ರೇಜಿಗೆ ಹುಟ್ಟುತ್ತದೆ.

ಕಾವೇರಿದ ತಲೆಗೆ ಸಹನೆಯ ಉಪಚಾರದ ಸಾಂತ್ವನದ ತಂಪೆರ—
ಚಲಾರೆ

ಪ್ರಸರಿತ ವ್ಯ ಹೇಸಿಕೆಗೆ ಕಿವುಚುತ್ತದೆ
ಸಪ್ಟೆಂಬರಕ್ಕೆ ಖಾತ್ರೀ ಧಾಡಿಯಾಗಿದೆ.
ಖೂಳನಗೆಯಲ್ಲಿ ನನ್ನ ನೋವಿನ ನರಳಾಟ
ಮುಚ್ಚಿ, ಗೆಲುವಿನ ಸೋಗಿಗೆ ಪ್ರಲೋಭಿಸುತ್ತದೆ
ದುಡ್ಡಿನಷ್ಟು ಕುಡಿಸಿ ರೂಪಾಯಿಯ ದಿಮಾಕು
ಮರೆಯುವ ಗುಂಗು ಹಿಡಿಸುತ್ತದೆ.

ಸೆಪ್ಟೆಂಬರದಲ್ಲಿ ಯೋಚನೆಗೆ ಏಳ್ಗೆಯಿಲ್ಲ
ಈ ತಿಂಗಳಲ್ಲಿ ಹುರುಪಿಗೆ ಕೊಂಬಿಲ್ಲ
ಹುರುಪಿರದ ಕವಿತೆಗೆ ವೀರ್ಯವಿಲ್ಲ
ವೀರ್ಯವಿಲ್ಲದೆ ನಾನೆಂಬ ನಾನು ಕೂಡ ಇಲ್ಲ

೧೨ ಸೆಪ್ಟೆಂಬರ್ ೧೯೭೩

## ಹೀಗಾಯಿತು ಋತು ಸಂಹಾರ

ಅವಳುಟ್ಟುದ ಬಿಟ್ಟ ಕಣ್ಣಿಂದ—ಕೀಲಿಸದೇ—ನೋಡು-
ವುದ ವ್ಯಸನ ಮಾಡಿಕೊಂಡಾರಿಂದ ಅವನ ಮನ-
ಸೆಲ್ಲ ಮಂಗನೊ ! ಮಂಗನಾಟಕ್ಕೆ ಮರುಳಾದ ಸಿಂಗನೋ ! !

ಅವಳುಟ್ಟುದ ಬಿಚ್ಚಿಸುವ ಬಗೆ ಹೇಗೆಂ-
ದು ತದೇಕ ಯೋಚಿಸುವ ಚಟ ಮಾಡಿಕೊಂಡಾಗಿಂದ
ಇವನ ಮೈಯೆಲ್ಲ ಕಾಮನೊ ! ಕಾಮಸುಟ್ಟುಳಿದ ಮುಷ್ಟಿ
ಮಾತ್ರದ ಬೂದಿಯೊ ! !

ವೈಶಾಖ ಮಳೆ ಸುರಿದು ದಿರುಸು ನೆಲವೆಲ್ಲ ಕೆಸರಾಗಿ
ಮಣ್ಣು ಹುಡಿಹುಡಿಯಲ್ಲಿ. ಹೆಜ್ಜೆ ಹಾಕುವ ಬಯಕೆ-
ಬಸಿರಾಗಿ ಪೊಚ್ಚೆ ಮುಟ್ಟದ ಇವಳ ಅಂಗಾಲೆಲ್ಲ ಮೈಲಿಗೆ !
ಮನಕೆಲ್ಲ ರೇಜಿಗೆ ! !

ಮಂಗನಾಟದ ಆ ಪರಿಯ ಆ ಸಂಭ್ರಮದ ಆ ಪೊರೆ
ಕಳಚಿ ಸಿಂಗನುಡುಗೆಯೂ ನಿಧಾನ ಉಚ್ಚಿ ತೊಟ್ಟ ತೊಡುಗೆಯೂ
ಕ್ರಮೇಣ ಬಿಚ್ಚಿ ರೊಪ್ಪನೆ ತುಪ್ಪುಳದ ಹಾಸಿಗೆಯನ್ನವುಚಿದರೆ—

ಹೊರಗೆ : ಹೊಂಡದಗಲದ ತನ್ನ ಆಗಸ ಬಾಯಿಗೆ
ಅಂಗೈ ರಪರಪ ಅಪ್ಪಳಿಸಿ ಲಬಲಬೋ ಹೊಯ್ದು ಕೊಳ್ಳುವ
ಜೇಷ್ಠದ ಮಳೆಯಲ್ಲಿ, ಮನುಷ್ಯನ ಕಾವ್ಯ ಅಥವಾ ಮದ್ಯಾಹ್ನ ಬಾಡಿ

ಸಂಜೆ ಪಕಳೆ ಉದುರುವ ಹೂವೂ ಅರಳದ, ಬಯಲಿಗೇ
ತೆರದಿಟ್ಟ ವಸಂತೆಯು ಹೊಕ್ಕಳಲ್ಲಿ, ಕ್ರಮೇಣ ಹೊಕ್ಕಳ ಕೆಳಗೆ
ಎಂಥಾ ಬಿಸುಪು ಬೆಳ್ಳಂ ಬೆಳತನಕ ಚಾಚೂ ತಪ್ಪದೆ ಹುರುಪು
ತರುವ ಬಾಧ ಜೊಂಪು !!

೨೩. ಜೂನ್ ೧೯೭೩

# ಸೆಳವಿನಿಂದ ದೂರ.......

ದೀಟಾರ ಆಡಿಸೋ ಗೆಳೆಯಾ
ಕರೆಯೋ ಹಗಲೆಲ್ಲ ನೆನಪಾದಿ ಉಳಿವ
ಈ ಹೊತ್ತಿಗೆ ತಂಪುಗಾರಾದಿ ನನ್ನೊಂದಿಗೆ
ಕೂಡಿ—ಕುಣಿವ ಆ ಗೆಳತಿಯನ್ನ ಕರೆದು

ಬಾರೋ ಬರದಿದ್ದರೆ ಎಳೆದು ತಾರೋ
ಕೊಂಕಿಸ ಬಲ್ಲೆನೋ ಹುಬ್ಬ, ಚಿವುಟಿ ತುಂಟಗಣ್ಣ,
ಮುಂಗಾಲ ಸ್ನಾಯು ಎತ್ತಿ, ನಾದಿ ಹಿಂಬಡ ಏರಿಸಿ
ತೊಡೆ ನಡುಗಿಸಿ ತಾಳಹಾಕಿ, ತಿರುವ ಬಲ್ಲೆನೂ ಅವಳ ಸೊಂಟ.

ತಿಗರಿ ತಲೆ ಇದು, ಮಧ್ಯಾಹ್ನ ಕಚೇರಿಯಲಿ ಗರ ಗರ
ತಿರುಗಿದಂತೆ- ಈಗಲೂ ವನ್ನವಳೆಂಬ ಈ ಹೊತ್ತಿನ ಈ
ಗೆಳತಿ ಕಾಣುತ್ತಲೇ ಸಹಜ ಕೈ ತೋಳಿಗೆಟಕುತ್ತಲೇ
ತಿರುಗುತ್ತದೆ; ನಡಿಗೆ ಗಡಿಬಡಿಸುತ್ತದೆ; ಚಿಂತೆ ತಣ್ಣಗಾಗುತ್ತದೆ.

ದಿನದ ಬೇಸರಿಕೆಗಲ್ಲ
ದೈನ್ಯಕ್ಕಲ್ಲ ಎಂದೂ ಕಂಡಿಲ್ಲ, ಈಗ
ಕಂಡೆನೆಂಬ ಹಪಾಟಿತನಕ್ಕಲ್ಲ.

ತಲೆಚಿಟ್ಟನ್ನಿಷ್ಟು ಈ ಸಂಜೆ ಈಕೆ ಸಿಕ್ಕಳಲ್ಲ ಈ
ಹೊತ್ತು ಮರತಂತೆ ಮಾಡುವ ನಾಟಕ:
ಲವಲವಿಕೆಯ ಕುಣಿತ
ಮುಖವಾಡವಿಲ್ಲದ ನಟನೆ

ಗೆಳೆಯಾ ಗೀಟಾರ ನುಡಿಸುವುದಿನ್ನು
ಸಾಕು ಮಾಡೋ ಗೆಳೆಯಾ
ಕತ್ತಲಲ್ಲೂ ಬೇಸರದ ಕಹಿಯಾಗಿ ಉಳಿವ
ಈ ಹೊತ್ತೆಲ್ಲ ಕುತ್ತಿಗೆ ತವಕ ಕುಡಿದು
ನನಗಾಗಿ ಕುಣಿಯುದ, ಮೈ ಕೊಂಕಿಸದ
ಇವಳ ಸಹವಾಸ ತಪ್ಪಿಸೋ ಇವಳ

ಉನ್ಮತ್ತ ಹೆಜ್ಜೆಗಳನ್ನತ್ತ ನೂಕೋ ಸೊಂಟ
ಎಲ್ಲದ ಇವಳ ನೀನೆ ಒದೆಯೋ ಇವಳ
ತೊಡೆತುಂಬ ಚುಟುಕು ಮುಳ್ಳಾಡಿಸಿ ನನ್ನ
ಸಿಟ್ಟು ಸೆಡವುಗಳ ನೀನೆ ತೀರಿಸಿಕೋ ಗೆಳೆಯಾ,
ಬರಬಾರದೋ ಗೆಳೆಯಾ ನನ್ನಂಥವನು ಇಲ್ಲಿ
ಆಗಬಾರದೋ ಗೆಳೆಯಾ ನನ್ನಂಥವನಿದೀ ಪಾಡು
ಗೀಟಾರ ಗೂಟಾರವನ್ನತ್ತ ಕಿತ್ತಿ ಬೀಸಾಡೋ ಈಗ
ನಾ ಹೋದ ಬಾಗಿಲನ್ನೂ ನೀನೇ ಮುಚ್ಚೊ........

ಹಾಗೇ ನನ್ನ ನಿನ್ನ ಹಾಳು ಗೆಳೆತನಕ್ಕೂ
ಹಾಗೇ ನನ್ನ ನಿನ್ನ ಹಾಳು ಗೆಳೆತನಕ್ಕೂ
ನನ್ನ ನಿನ್ನ ಹಳಸು ನೆನಪಿಗೂ ಕಲ್ಲು
ಹಾಕೋ, ನೀನೇ ಕಡೆತನಕ ಮಣ್ಣು ಮಾಡೋ.

೨ ಮೇ, ೧೯೭೩

# ಆಟ

೧

ಗದಗುಟ್ಟ ಬಂತು ಸೆಳೆದು ಮಿಂಚುತ್ತ ಬಂತು ಕಾಡು—
ಮೋಡೆಲ್ಲ ಮೆಟ್ಟುತ್ತ ಬಂತು ಆತಂಕ ಸೀಳುತ್ತ ಕಡಿಯುತ್ತ ಬಂತು
ಕತ್ತರಿಸಿ ನಿಂತು ಬೋಳಿಸುತ ಹೊಟ್ಟೆಗಿಲ್ಲದವರ ಗೋಳಿಸುತ
'ಅಬಬಾ'
ಎನಿಸುತ್ತ ಬೊಟ್ಟು ಕಚ್ಚಿಸುತ ಆದೋ ಬಂದೆ ಬಂತು 'ನಿನ್ನ
ಕಬಳಿಸಿತೇನೋ ?
ತಾ ಮಾತ್ರ ಎದೆ ಸೆಟಸಿ ಸಾರಿತೇನೋ ನೋಡುತ್ತ ನಿಂತಿರಲು
ನಾನು—ನೀನು ?

ಮತ್ತೆ ಹೊರಟಿತೊ ಅತ್ತ ಬಂದೀತು ಬಿಡೊ ಮತ್ತೆ ಇತ್ತ ಮೈ
ಮರೆತ
ನನ್ನ ಕಾಡನ್ನ—ಮೋಡನ್ನ ನಿದ್ದಿಸುವ ನಾಡನ್ನ ಕಬಳೀಸಿ ನಕ್ಕೀತು
ನಮ್ಮನಳಸೀತು ಗೋಳು ಹಿಡಿಸೀತು

೨

ಬಂತಪ್ಪೋ ಬಂತು ಈಗ ರೊಚ್ಚಿನಿಂದಲೆ ಬಂತು ಹೊಟ್ಟೆ ಒಗಿ-
ಯಲು ಬಂತು
ನಿಂತ ಕಾಲನ್ನೇ ಮುರಿಯು ಬಂತು ನೆಲವ ಸೀಳಲು ಬಂತು
ಓಡಲೆಲ್ಲಿಗೆ ನಾನು ?
'ಓಡುವಿರೆಲ್ಲಿ ನೀವು?' ಎಂಥಾಗತಿ ವಕ್ಕರಿಸಿತಲ್ಲಾ ! ನಾಚಿಯೇ ನಾವು
ಗಬ್ಬಾದೆವಲ್ಲಾ ಭೀತಿಗೇ ಮುಪ್ಪಾದೆವಲ್ಲಾ ತಲೆ ತುರಿಸಿ
ಬೋಳಾದೆವಲ್ಲಾ
ಹೋಯಿತೆಲ್ಲಿಗೊ ನಮ್ಮ ಕೆಚ್ಚೆದೆಯು ಹರಯ ?

೩

‘ಚಿಂತಿ ಕಡಿಯಿತು ಬಿಡೋ’‘ಈ ಗದ್ದಲದಲ್ಲೇ ಹೊಟ್ಟೆ
ಬಿರಿಯಿತಲ್ಲೊ ?
ರುಂಡವೇ ತುಂಡಾಯಿತಲ್ಲೊ ಮಾಂಡದಿಂದ !
ಕೂತ ಕೂತಲ್ಲೇ ಮೈ
ತತ್ತರಿಸಿತಲ್ಲೊ ಎತ್ತಲಾಗದ ಶಸ್ತ್ರ ಕೈ ಕತ್ತರಿಸಿತಲ್ಲೊ ?’
ಮುಳುಗಲಿನ್ನೋ, ಗುಡುಗಿನಾರ್ಭಟದಲ್ಲಿ ಮಣ್ಣುಪುಡಿಯಾಗಲೇನೊ!
ರಾಡಿ ರೊಜ್ಜಾಗಲೇನೋ? ಮತ್ತದೋ ನೆನಪೀಸು ಬಂತು
ಧೋಧೋ ಗುಂಡಿ
ತೋಡವುದಿನ್ನು ನಿಲ್ಲುವುದು ಹಾಗೆ ಹಳ್ಳವಾದಿ ಎಂಥಾ
ಸಪ್ಪಳ ಮಾಡುತ್ತ
ಬಂತಪಾ ! ನಿಂತಿತಿಲ್ಲಿದೋ ಈಗ, ನಿಶ್ಶಬ್ದ ಹೆದರಿ ಕಂಗಾಲಾದ
ಬಡ ಹುಡುಗನಂತೆ

೪

ಇನ್ನೇನು, ಇಂಗುವುದೆ ಕೆಲಸ ಸದ್ದಿಲ್ಲದೆ ಮಣ್ಣನಾಳದಲಿ ಲಗ್ಗೆ
ಹಾಕುತ್ತ
ಅತಳ ವಿತಳ ಪಾತಾಳ ರಸಾತಳ ತನಕ ಹನಿ ಹನಿಯಾಗಿಳಿಯುತ್ತ
ನೆಲದ ಒಂದಿಗಿನ ಆ ಆವೇಶ, ಕೂಗಾಟ, ಚೀರಾಟ
ಬೈದಾಟಗಳಿಲ್ಲದೆಯೇ
ಇಂಗುವಾಟ ನಮ್ಮ ಮಾತ್ರ ಹೇಳಹೆಸರಿಲ್ಲದೆಯೆ ರಟ್ಟೆ ಮುರಿತದಲಿ
ಹಿಂಡಿ, ಒಣಗು ಹಾಕುವಾಟ,ಬತ್ತಲೆಯಾಟ ದಿರಿದಿರಿ ಬಗರಿಯಾಟ.
ಕಣ್ಣು ಮುಚ್ಚಾಲೆಯಾಟ ಕಾಣದಾದಾಗ ಸೊನ್ನೆಯಾಟ
ಕತ್ತಲೆಯಾಟ
ಕಿವುಡರಾಟ ಕುಂಟಾಟ ಸಣ್ಣಾಟ ದೊಡ್ಡಾಟ ಬಯಲಾಟ...........

೫

ನಿಜದ ಎದುರಲ್ಲಿ ಎಲ್ಲ ಆಟದ ಗತಿಯೂ ಹೀಗೇ—
ಎಲ್ಲ ಆಟದ ಎಲ್ಲ ನೋಟದ ಗುರಿಯೂ ಹೀಗೇ—ಏನೋ ?
ಈಗ ಗೊತ್ತಾಯಿತು

೨೩ ಜುಲೈ ೧೯೭೩

# ಆಸಕ್ತಿಯೋಗ—ಅನಾಸಕ್ತಿಯೋಗ

## ಆಸಕ್ತಿ :

ರಹಸ್ಯವಾರ್ತೆಯು ಒರೆಯು ಬಂದೆಯಾ ? ಬಾ ಕೂಡು
ಆ ಪಾಟೀಕಲ್ಲು ಹೊಲಸು. ಧೂಳು ಮೆತ್ತಿರಬೇಕು. ತುಟಿ
ಪತ್ರುಳಿಸಿ ಊದು. ಹಾರಿ ಹೋದೀತು ಧೂಳು ಈಗ ಕೂಡು.

ಕೂತೇ ಬಿಟ್ಟೆಯೇನು ? ಕೂತುವುದಕ್ಕೂ ಶಿಸ್ತಿದೆ, ನಿಯುತ್ತಿದೆ.
ಅಚ್ಚುಕಟ್ಟಾಗಿ ಕೂತರೆ 'ಊಟಕ್ಕೇ ತಯಾರಾದನೇನೋ?'
ಎಂದು ಕೂಡಿಸಿ-
ದವ ತಬ್ಬಿಬ್ಬಾದಾನು. ಕೂತದ್ದು ಕೂಡಿಸಿದವನಿಗೆ ಪ್ರಶಸ್ತ ಕಾಣಬೇಕಲ್ಲ!

ಹರಿಕೊತ್ತಿನಲ್ಲಿ, ಅದೂ ಅವಸರದಲ್ಲಿ ಚಿಳ್ಳಿ ಪಿಳ್ಳಿಗಳು ಓಣಿ ಇಕ್ಕೆಲ-
ದಲ್ಲಿ ಕೂಡುತ್ತಾವಲ್ಲ, ಮುಖಕೆಂಪಗೆ, ನೀರು ಬಳ ಬಳ ಕಣ್ಣಲ್ಲಿ—ಹಾಗೆ
ಕೂತೀಯೋ. ಯಾವುದೇ ಗಳಿಗೆಗೆ ಎದ್ದೋಡುವವನಂತೆ, ಕೂಡಿಸಿದವನ

ಭಿಡೆ-ಮುರವತ್ತಿಗೆ ಒಳಗಾಗದವನಂತೆ, ಕೂತಜಾಗೆಗೆ ತೆಗ್ಗು ತೆವರಿ
ಬೀಳದಂತೆ, ಆಯ ತಪ್ಪದಂತೆ, ಆಮಾತ ಕೂಡುವ ಗತ್ತು ಇದೆಯಲ್ಲ,
ಅದು ಈ ವಯಸ್ಸಿಗೆ, ಯಾರೋ ಕಟ್ಟಿದ ನಿನ್ನ ಕಿಮ್ಮತ್ತಿಗೆ ಸರಿ
ಹೋಗದ ಮಾತು

ಇವೆಲ್ಲ ಘಾಲತೂ ಎಚ್ಚರಿಕೆ, ಅಪಾಯದ ಪರಿತಾಪಗಳ ನೆವಪಿನಲ್ಲಿಟ್ಟು
ಕಣ್ಣನೋಟದ ನೇರ, ಅವಿಚಲಿತ ಹುಬ್ಬುಗಳ ನಡುವೆ ಒತ್ತೀ ಇಟ್ಟು
ಧ್ಯಾನಾಸಕ್ತನ ಹಾಗೆ ಕೂಡು ನನ್ನ ಪುರಾ ಮರೆತು, ನಿನ್ನ ಮಾತ್ರ
ನೀ ನೆನೆದುಕೋ.

ಅಲ್ಲಮ ಪ್ರಭುವಾದ................/೪೮

## ಅನಾಸಕ್ತ :

ಮುದಿಯಿತೇನಪ್ಪ, ಪ್ರಬಂಧ ಶೈಲಿಯು ಉವಾಚ ?
ರಹಸ್ಯ ವಾರ್ತೆಯನು
ಕೇಳಲಿಕ್ಕಲವೆ, ನಿನ್ನ ಹಿತ್ತಾಳೆಯು ಕಿವಿ ಅಗಲಿಸಿ ನನ್ನ ಕಡೆಗೆ ಆನಿಸಿ
ಆದಿಂದ ನೀ ಖಡೀ ನಿಂತದ್ದು ? ನಾ ಕೂತೆ ಈಗ ನಿನ್ನದೇ ಪಾಳಿ-

ಎದ್ದೇನಿಲ್ಲು. ನಿಲ್ಲುವ ಪೋಜುಗಳ ನಾ ಕಲಿಸ ಬೇಕೇನು? ನಿಂತರೆ ನಿಲ್ಲ-
ಬೇಕಯ್ಯ, ನರ ಚಟ ಚಟ ಅನ್ನಿಸಿ, ಸೆಟೆದು. ಆದೀಗ ಆರಾಮುಕ್ಕಾದಿ
ಕಾಲು ಕಿಸಿದು ಕೈಗಳನ್ನಿಳಿ ಬಿಟ್ಟು ಪ್ಯಾಂಟಿನಲ್ಲಿ, ಇದ್ದರೆ ಚಿಲ್ಲರೆ ತಡಕಿ
ತಡಕಿ ಎಣಿಸಬೇಕಯ್ಯ. ವಂಚನೆಯು ಗುಣಿಸಬೇಕಯ್ಯ ಅಥವಾ ಖಾಲಿ
ಕಿಸೆ, ಮುಷ್ಟಿಯಿಂದುಬ್ಬಿಸಿ ತಿಂಗಳ ಕೊನೆ ದಿನಗಳ ಬುಕ್ಕಡತನ
ಮುಚ್ಚಬೇಕಯ್ಯ ನಾ ತಂದ
ವಾರ್ತೆಯು ಹುರು ಹುರು ನಿನ ಒಳಗನ್ನೂ ತುರಿಸ ಹಚ್ಚಿದ್ದು ಇದಕ್ಕೇ
ಅಲ್ಲವೇನೋ ? ಸುದ್ದಿ ಒರೆಯುವುದಕ್ಕೇನೊ, ಈ ದಿನ ಮಾನದಲ್ಲಿ ?
ಮಲಗಿದಾಗೊಂದು ಬಿಟ್ಟರೆ ಸದಾ ಅದನ್ನೇ ಮಾಡುವುದಿಲ್ಲವೇ?
ನಾ ಹೇಗೆ
ಕೂತರೂ ಅಷ್ಟೆ, ನೀ ಹೇಗೆ ನಿಂತರೂ ಅಷ್ಟೇ ಮಾತಿನ ಸೂಜಿಗಲ್ಲು
ನಮ್ಮ ನಡುವೆ ದೆವ್ವದಂತೆ ಧುತ್ತೆಂದು ಬಂದು ಎಳೆಯು
ತ್ತದೆ : ಧ್ಯಾನ ಮೌನ ಏಕಾಂತಗಳ ಭಂಗಿಸುತ್ತದೆ. ರಹಸ್ಯ ಭೇದಿಸಿ
ಅಸ್ತಿತ್ವಗಳ ಅಪಮಾನಿಸುತ್ತದೆ.ಏಳು ಮೇಲೆ ಏನಿದೆ ಬರೇ ಹರಟಿದರೆ?

ಸಿಂಗಲ್ ಚಾ—ಕಾಫಿ ಎಲ್ಲಾದರೂ ಉದ್ರಿ ಸಿಗುತ್ತದೋ ಪತ್ತೆ
ಹಚ್ಚೋಣ, ಪೇಟೆಯಲ್ಲೆಲ್ಲ ದಲೆದು ಉದ್ರೀ ಸಿಕ್ಕರೆ ನನ್ನ-ನಿನ್ನ ಪುಣ್ಯ
ಸಿಕ್ಕಷ್ಟು ಸೆಡ್ಡೋಣ ಉದ್ರೀ ಒದುಕನ್ನ ವೊಳಹಾಕಿ ಅಳಿಯೋಣ.

೫ ಆಗಷ್ಟ್. ೧೯೭೩

# ನಿನ್ನ ಗುರುತಿಗೆ ನಿನ್ನ ಮನೆ ವರ್ಣನೆ

(ಒಂದು)

ಮುಖ ಚಹರೆಯ ವರ್ಣನೆಗೆ ಮಾತು ಬೇಕು
ತುಂಬ ಕಡಿಮೆ ಸಾಕು ಪಕ್ಕಾ ಮಾತು ನಾಕು
ಮನೆಯ ಗುರುತಿನ ವರ್ಣನೆಗೆ ಮಾತು ಬೇಕಿಲ್ಲ
ಬೇಕು ನಕಾಶೆಯ ಕಲ್ಪನೆ ದಕ್ಷಿಣೋತ್ತರದ ದಿಗ್ ದರ್ಶನ

ಸಿಟಿಯಂತಹ ರಾಕ್ಷಸನ ಅಂಗಾವತಾರದ ಅಕರಾಳ
ವಿಕರಾಳ ವಿಸ್ತರಣೆಯ ಈ ವ್ಯವಸ್ಥಿತ ಮನೆ–
ಮಾರಿನಲ್ಲಿ ಈ ಚಳಿಯಲ್ಲಿ ಬೆಚ್ಚಗೆ ಮೊಲವಾಗಿ
ಆ ಬಿಸಿಲಲ್ಲಿ ಪೊರೆ ಬಿಟ್ಟಿದ ಹಾವಾಗಿ ತಣ್ಣಗೆ

ನನ್ನ ಆಗು—ಹೋಗುಗಳ ಕನಸಿಸುತ್ತ ನನಸಿಗಾಗಿ
ಹಾರಯಿಸುತ್ತ ನಡುನಡುವೆ ಒಂಟಿತನದ ಇರುವಿಕೆಗೆ ಬೇಸರಿಸಿ
ಆಕಳಿಸುತ್ತ ಒಟ್ಟಿನಲ್ಲಿ ಏನೂ ಆಗದೇ ನಿರೀಕ್ಷೆಯ ಗಳಿಗೆ
ಶೂನ್ಯವಾದದ್ದಕ್ಕೆ ಆತಂಕಪಡುತ್ತ 'ಬಂದೇ ಬರುವನಿವ'ನೆಂದು

ನನಗಾಗಿ ಹಾದಿ ಅಳೆಯುತ್ತ ಕೂತಿರುವ ನಿನಗೆ ನಿನ್ನ ಮನೆ
ಗುರುತಿಗೆ ನೀನಿತ್ತ ನಕಾಶ ರಹಿತ ವರ್ಣನೆ ಮರೆತು ಬೀದಿ–

ಅಲೆಮಾರಿಯಾದ ನನ್ನ ಪಾಡೇನು ಗೊತ್ತು ? ಆ ಪಾಡಿನ ವರ್ಣನೆ
ಗೆ ನಿಂತೆನೆಂದರೆ—ನಿನ್ನ ಮನೆ ಗುರುತಿನ ನಿನ್ನ ಅಪ—
ರೂಪ ವರ್ಣನೆ ಇನ್ನೂ ಮರೆವಾಗುತ್ತದೆ ನಿನ್ನ ಮನೆ ಆಸು–ಪಾಸಿನ
ರಸ್ತೆ ತಿರುವು ಚೌಕ ಕಟ್ಟೆಯ ಗುರುತುಗಳೆಲ್ಲ ದಂಡ ಕಾರಣ
ವಾಗುತ್ತವೆ

ಏಕೆಂದರೆ ಈ ಸಿಟಿಯು ಈ ದಂಡಕಾರಣ್ಯದ, ಈ ಗೋಜಲೊಂದೂ
ಮನಸ್ಸಿಗೆ ಬಂದಂತೆ ಹಬ್ಬಿಸುತ್ತಿಸಿ, ಸುತ್ತಾಡುವ ನಿರರ್ಥಕ ಗಾಡಿಯ
ರಸ್ತೆಯೊಂದೂ ಸದಾ ಬಾಡಿಲಿಕ್ಕಿ ಏಕತಾನದ ಉರಿಯಲ್ಲಿ ಮನಸ್ಸು
ಥಡಿಸುವ
ರಾಕ್ಷಸೀ ಮನೆಯೊಂದೂ ಆ ನನ್ನ ಆ ಸಣ್ಣ ಆ ಸರಳ ಊರಿನಲ್ಲಿಲ್ಲ

ಹಾಗೇ ನನ್ನ ಮನಸೂ: ಸಾವಿರ ಆತಂಕ ತಳ್ಳಂಕ ಚಡಪಡಿಕೆ
ದಟ್ಟೈಸಿದ್ದಾಗೂ ಒಂದಾದರೂ ಮುಚ್ಚಿದ ಬಾಗಿಲಲ್ಲಿ ಭದ್ರಕಿಟಕಿಯಿಲ್ಲ
ತೆರೆದಿಟ್ಟವೆ ನೋಡು—ಗಾಳಿ ಮೋಡ ಸಿಡಿಲುಗಳೇ ಏಕೆ, ಮಿಂಚು
ಛಕ್ಕೆಂದರೂ ಹೊರಬರುವಂತೆ, ಎದೆಯು ನಿಶ್ಚಲ ದೃಢಪಡಿಸುವಂತೆ.

(ಎರಡು)

'ಇಂಥಾ ಸ್ಟೇಜಿನಲಿ ಬಸ್ಸಿಳಿದು ಇಳಿದೊಡನೆಯೆ ಬಲಕ್ಕೆ
ಕಾಣುವ ಉದ್ದಾನುದ್ದ ರಸ್ತೆಯ ಗುಂಟ ಅವಿಚಲಿತ ನೇತ್ರನಾಗಿ
ನನ್ನ ಧ್ಯಾನಿಸುತ್ತಾ ಬರುತ್ತಾ ಇರಬೇಕು: ಹಾಗೆ ಸೀದಾ ನಡೆಯುವುದು
ಸುದೀರ್ಘವೂ ತಲೆ ನೋವಿನದೂ ಕಾಲ್ ದಣಿವಿನದೂ ಆದೀತು....'

ಆಯಿತು ನಿನ್ನ ವರ್ಣನ ಶಕ್ತಿಯ ಅಪೂರ್ವತೆ ಕಾವ್ಯದಂತೆ ಬೆರಗು
ಪಡಿಸಿತಷ್ಟೆ: ನನ್ನ, ನಿನ್ನಂತೇ ಯೋಚಿಸ ಹಚ್ಚಿ ನನ್ನ
ಈ ಉದ್ದಾನುದ್ದದ
ಮನಸ್ಸನ್ನು ಕುಬ್ಜಗೊಳಿಸಿತಷ್ಟೆ: ಹಾಗೇ ನಿನ್ನ ಭೌತಿಕ ಕುಬ್ಜತನ—
ದೆತ್ತರಕ್ಕೆ ನನ್ನ ಆಕಾರವನ್ನು ಇಳಿಸಿ, ವಿಕಾರ ಮಾತ್ರ ಹೆಚ್ಚಿಸಿತಷ್ಟೆ.

ಏಕಾಏಕಿ ಹೀಗೇಕಾದೆನೆಂದು ವಿಸ್ಮಯದಲ್ಲಿ ನಿನ್ನ ಮನೆಯ . ಆಸು-
ಪಾಸುಗಳನ್ನ ಮೂಸಿಸುತ್ತ ನವಿರಾದಿ ಯೋಚಿಸಿ ನಿರುತ್ತರದ
ಗೊಂದಲದಲ್ಲಿ
ನಿನ್ನ ಹೆಸರಿನ ಫಲಕ್ಕಾದಿ ತಡಕಾಡುತ್ತ ಎದೆಯಾಳದಲಿ ಚಿಂತಿಸಿದೆ:
ಏನೊ ಬಗೆ ಹರಿಯದೆ ಈ ಅಳ್ಳಕಿನ ಮನಸ್ಸಿನ ತುಂಬ ಒದ್ದಾಡಿದೆ.

ಬಹುಶಃ ನನ್ನ ಕಾಲಿನ ಪುಣ್ಯ: ಅರಸುವ ಬಳ್ಳಿ ಕಾಲ ತೊಡಕಿತು
ಆ ಗಳಿಗೆ ಹುಷಾರಾಗಿದ್ದೆನಲ್ಲ, ಎಡವಲಿಲ್ಲ
ಮುಗ್ಗರಿಸಿದ್ದರೂ ನೀನಿದ್ದೆಯಲ್ಲ, ಎತ್ತಿ ಅನಾಮತ್ತು ಮಂಡೆ
ಒರೆಸಿ ಗಾಯಕ್ಕೆ ಉಪ್ಪೊರಸುವ ಬದಲು ಮಾತಿನ ಮುಲಾಮು
ಲೇಪಿಸಲು!

ಹಾಗೇನಾಗಲಿಲ್ಲ ಇರಬೇಕ. ನಿನ್ನ ಪುಣ್ಯ ಸುಸೂತ್ರ ಬಂದು
ನಿನ್ನೆದುರು ಕೂತೆನಾದರೂ ನಿನ್ನ ಚಾಕ ಚಕ್ಕದ ಅಪೂರ್ವ
ಬಲೆಯಲ್ಲಿ ಬಂದಿಯಾಗದೆ ಕಾಲ ತೊಡಗಿಸದೆ ಶಿಸ್ತಿಂದ ಮಾತು ಬಗೆ-
ಹರಿಸಿ ಗತ್ತಿನ ಮಾತೆಲ್ಲ ನಿನ್ನಂತೆ ಆಡಿ ನಿನ್ನ ಮಾತು ನಿನ್ನಲ್ಲೇ ಉಳಿಸಿದೆ

ಎಲ್ಲಾ ಮಾತು ಹಾಗುಳಿಯಲಾರವು ಗೆಳತಿ ಮಾತಿನ ಪರಂಪರೆ
ಸುಖ ಲೋಲುಪ್ತವಾದಷ್ಟೇ ಪೇಚಿನ ಅನಿವಾರ್ಯ ಬಲೆಯೂ ಹೌದು
ನೀನು ಸೆಳೆಯುವ ಮೊದಲೇ ನಾನೇ ಬಲೆ ಬೀಸಿ ಒಗೆದು ನನ್ನ
ಕಾಲನ್ನೇ ತೊಡಕಿ,ಕೈಯೂರಿ,ಕೈಮುರಿದು ಮಂಡೆಯೂರಿದೆನಿನ್ನೆದುರು

ಕೂತವನ ನೀ ಒಲಿಸಲಾರೆ ? ಮೊನಚು ಮನಸಿನ ಈಟಿಯಿಂದ
ತಿವಿಯಲಾರೆ ? ನಿನ್ನ ಸ್ನಿಗ್ಧ ಕ್ರೌರ್ಯಕ್ಕೆ ಏನೆನ್ನಲಿ? ನನ್ನ ಸುತ್ತ ನೀ
ಹಬ್ಬಿಸಿರುವ ಈ ಅಪ್ಯಾಯಮಾನದ ಸ್ನೇಹ, ಸುಮ್ಮನೆ ಹೊಗಳಿ
ಪೂಜಿಸು
ವಂಥದ್ದಲ್ಲ. ನೋಡು, ಈಗ, ನೀನೆಂದರೆ ನನ್ನ ಅಹಂಕಾರದ
ಅಮೂರ್ತರೂಪ.

೧೨ ನವಂಬರ್ ೧೯೭೪

ಅಲ್ಲಮ ಪ್ರಭುವಾದ........../೬೨

## ಇಪ್ಪತ್ತೆಂಟರ ಹೊತ್ತು

ಪರದೆಯು ಮರೆಗೆ ಈಗಷ್ಟೆ ಸರಿದು
ಮರೆಯಾಯಿತಲ್ಲ ಮುಖ, ಎಂದಿಗೂ ಅಂತಃಕರಣಕ್ಕೆ
ಅಪರಿಚಿತವಲ್ಲ; ಒಳ ಚಹರೆಯಂತೂ ಯಾವ ಕಾಲಕ್ಕೂ
ಆಪ್ಯಾಯಮಾನ ಈ ಜೀವಕ್ಕೆ ೧

ಕಾರಣವೇನೊ ಈಗಷ್ಟೆ ಮರೆತಿದೆ. ಕ್ಷಣ
ಕಾಣಿಸಿ ಮತ್ತೆ ಸರಿದು ಮರೆಯಾಯಿತಲ್ಲ ಜೀವ,
ಮೂಡಿಸಿದೆ ನೆನಪಿಗೆ ವ್ಯಸನದ ಹಳದಿ ರೆಕ್ಕೆ ೨

ಗಗನಮುಖಿ ನಿರಾಳ ಹಾರಬೇಕೆಂದರೆ ನೋವು
ಚಿಗುರಿ ವರ್ತಮಾನದ ಹಸಿರೆಲೆಯನ್ನು
ನಾಳೆ ಹಣ್ಣಾಗುವ ತಿಳುವಳಿಕೆ ಮಿಡಿಯನ್ನು
ಮೆತ್ತಗೆ ಚಿವುಟಿ ಮುರುಟಿದೆ
ನೆನಪಿನ ಲವಲವಿಕೆ ೩

ಕಾರಣ ಪರಂಪರೆ ಯೋಚನೆ ಜರಡಿಯಲ್ಲಿ ಜೊಳ್ಳು
ಕಾಳಾಗಿ ಉದುರಿ ಎಲೆ ಹೂ ಕಾಯಿ ಹಣ್ಣುಗಳಿಗಾಗಿ
ಕಾತರಿಸಿ, ಎಪ್ಪತ್ತರ ಬೆಳೆದ ವ್ಯಕ್ತಿತ್ವ ವೃಕ್ಷ ಪೊಳ್ಳಾಗಿದೆ
ಕಾಂಡದ ತುಂಬ ಪೊಟರೆಯಾಗಿ ೪

ನೆನಪಷ್ಟೆ ನಿಜ ?

ಅಂದೆಲ್ಲ ನಿನ್ನ ಮುಖ ಇಷ್ಟು ಮಖಾಳವಾಗಿರಲಿಲ್ಲ
ಗೆಳತಿ, ಇವತ್ತು ಕಳೆ—ಕೊಳೆಯಾಗಿ ನಂಬಿಕೆ-
ವಂಚನೆಯಾಗಿ ರೂಢಿ ರೀತಿ ರಿವಾಜು ಪರದೆಯಾಗುತ್ತಿದೆ. ೫

ಇಪ್ಪತ್ತೆಂಟರ ರಣ ಬಿಸಿಲಿನಲ್ಲಿ
ಪ್ರೇಮದ ಹುಣ್ಣು ಪೂರ್ತಿ ಒಡೆದು ಅಂದು ಕಂಡ ಮುಖವಷ್ಟೂ
ಪಳೆಯುಳಿಕೆಯಾಗುತ್ತದೆ.
ಅಂತಃಕರಣ ತಳಮಳಿಸುತ್ತದೆ.

೧೨ ಮೇ, ೧೯೭೪

ಕಣ್ಣಿಗೊಡ್ಡುಯುವ ಕೆಂಪರಂಜಕದ ಡಬಗಳ್ಳಿ
ಹಣ್ಣಿಗೆ ಮೈತುಂಬ ಜಿನುಗು ಸುಂಕ
ಮುಟ್ಟಿದರೆ ಈಕಳ್ಳಿ ಮುನಿಯುವದಿಲ್ಲ; ಬೆರಳ ಸೋಂಕಿ
ಭಗಭಗ ಉರಿ ಅಂಗೈ ತುಂಬ
ಲಬಲಬ ಹೊಯ್ದುಕೊಳ್ಳುವಂತಿಲ್ಲ

ಥಕಥಕ ಬಡಿದು ಕಾಲು ಕೈ, ವಿವಿಧ
ಮಣಿತಗಳಲ್ಲಿ ಮೈ ಕುಣಿಸಬಹುದು
ನಾಚಿ ನೀರಾಗುವಂತಿಲ್ಲ

ಕರಕುಶಲವಸ್ತು ಹೊಚ್ಚಿ ಜಿನುಗು ಸುಂಕಕ್ಕೆ
ಮುಚ್ಚು ಮರ್ಯಾದೆ ನೀಡಿ
ಮೆತ್ತನೆಯ ಸಿಪ್ಪೆ ಸುಲಿದರೆ—

ಪೇಟೆಯ ಯಾವ ಹಣ್ಣಿಗಿಂತ ಈ ಡಬಗಳ್ಳಿ
ಕಡಿಮೆ ರುಚಿ ?

ಬಿಡಿಸಿದ ಅಂಗೈ ಭಗಭಗ ಉರಿದರೂ ಚಪ್ಪರಿಸಿದ
ನಾಲಿಗೆ ಹೊಟ್ಟೆ ಅಪ್ಪಟ ಶುಚಿ !

# ಕವಿತಾ ಗೋಷ್ಠಿಗೆ ಸ್ವಾಗತ

ಆರಂಭಶೂರತ್ವದ ಈ ಕವಿತಾ
ಗೋಷ್ಠಿಗೆ ಬಂದ ಮಹನೀಯರೆ ಮಹಿಳೆಯರೆ ಶರಣು.
ಮಾನ್ಯರೆ ನೋಡಿದಿರಾ ಅಲ್ಲಿ ಆ ಜನದಟ್ಟಣೆ
ನೆರೆದವರ ಅಚ್ಚರಿಯ ಆ ವರ್ತನೆ !
ಅಂಕಿ ಸಂಖ್ಯೆಯ ಪಕ್ಕಾ ಲೆಕ್ಕ ಎಷ್ಟೇ ?
ಕೇಳಬಾರದು ಅದನೆಲ್ಲ. ಯಾರಿದೆ ಹೊತ್ತು, ಖಾನೇಸುಮಾರಿಗೆ ?
ನೂರು ಹೆಚ್ಚು ನೂರು ಕಮ್ಮಿ, ಇದ್ದಾರು ಸಾವಿರೆರಡು
ಸಾವಿರ ಮೂರು............

ಸಹೃದಯರೆ ಸ್ವಾಗತವು ನಿಮಗೆ ಸುಸ್ವಾಗತವು
ಧೂಳು ಜಾಡಿಸಿ ಎದ್ದು ಸ್ವಲ್ಪ ಮೇಲಕ್ಕೆ ಗೋಣೆತ್ತಿ
ನೋಡಿರಿ—ಇದೋ ಸಂಭ್ರಮದ ಕವಿಗಡಣ
ನಿಮ್ಮ ಸುತ್ತ : ಮೂಕವಿಸ್ಮಿತ ಸಭಾಂಗಣ !
ಈಗ ಕೇಳ್ರಿ ನಮ್ಮ ಪರಿಚಯ ಭಾಷಣ

ಇದೋ, ಇಲ್ಲಿ ಬರುತಿರುವ, ಅಶ್ಲೀಲದ ಗೊಡ್ಡು ನಿರ್ಬಂಧಗಳ
ಕೆಸರಗಾಲಿಂದ ಒದ್ದ ಈ ಕವಿಯ ಪರಿಚಯ ನಿಮಗಿಲ್ಲವೆ ?
ತಡೆಯಿರಿ, ಸುಮ್ಮನೇ ಕೈ ಕುಲುಕಿ, ನಮಸ್ಕರಿಸಿ 'ಹಳೆಮಂದಿ'
ಅನಿಸಿಕೊಳ್ಳ
ಬೇಡಿರಿ. ನೋಡಿಯೂ ನೋಡದಂತುಳಿದು ಬಿಟ್ಟರೆ ಸಾಕು,
ಹೆಮ್ಮೆ ಹುಟ್ಟುವುದು
ಅವನಿಗೆ ಒಳಗೊಳಗೇ; ಕೊಡು ಮೂಡುವುವೆರಡು ಎಳೆಯ
ನೆತ್ತಿಯ ಮೇಲೆ

ಸ್ವಲ್ಪ ಮಗ್ನರಾಗುವಿರಾ ಈಗ ? ಜನಜಂಗುಳಿಯ ನಡುವೆ, ದೋ
ತೋರಿ ಬರುತಿರುವ
ನಿನ್ನೆ ಮೊನ್ನೆಯ ನಮ್ಮ ನವಸಂವೇದನೆಗೆ ಪೂರಾಬಾತಿರುವ
'ಕವಿಡುಮ್ಮ'

(ನೋಡಲಿಕ್ಕಷ್ಟೆ ನರ ಪೇತಲ!) ಸ್ವರ
ಚಿತ ಕವಿತಾ ಓದಿ, ಇಂಪು, ನಮ್ಮ ನಿಮ್ಮ ಇದ್ದ ಬಿದ್ದ
ಸಂಕಟಗಳ ಒಮ್ಮೆ ನೀಗಲಿದ್ದಾನೆ

ಗಿಡ್ಡರಿ, ನೀವು ? ಯಾಕೆ ಭಿಡೆ ! ಸೆಟೆದೆದ್ದು ನಿಲ್ಲಿರಲ್ಲ !
ಅದೋ ಪ್ರತ್ಯಕ್ಷನಾಗುತ್ತಿರುವವ—'ವರ ಕವಿ'ಯು ಬಾಲಾಗೆಸಿ.
ಗಾಳಿಗಲ್ಲಾಡಿಸುವ ಹುರುಹುರು ಹುಟ್ಟದರೆ ಏಕಾಏಕಿ,
ನಿಮ್ಮ ಬಾಲವನ್ನೇ ಅಲ್ಲಾಡಿಸಿ ಕೊಡಿರವನಿಗೆ ಹೊಸ
ಸ್ಪೋರ್ಟ್-ಶರ್ಟ್
ಮಸಾಲೆ ಮಿರಚಿ ಭಾಜಿ ಹುರಿಗಾಳು ಶೇಂಗಾಗಳ.

ಇಲ್ಲಿವನ, ನೀವು ಖರೇ ಪ್ರಾಮಾಣಿಕರಾಗಿ-
ದ್ದರೆ ಮುಖನೋಡಿ ಮಣೆ ಹಾಕಬಾರದು.
ಕೆಂಡ ಮೀಸೆಯ, ಬಿಚ್ಚುಗತ್ತಿಯ ಕಣ್ಣಿನ, ತೆರೆದ
ಹಾವಿನ ನಾಲಗೆಯ ಈ
ಆಮಿಷ ಖೋರನ ಚಹರೆಗೆ ನಿರ್ವಿಣ್ಣರಾಗಬಾರದು.

ಖಾತ್ರಿ ಇಂವ ಕವಿತೆ ಓದುವದಿಲ್ಲ. ರಾಗ
ಬದ್ಧ, ದನಿ ಏರಿಸಿ, ಹಾಡುತ್ತಾನೆ
ಹಾಡಿ ಹಾಡಿ ಅಳುತ್ತಾನೆ
ಕ್ರಮೇಣ ನಮ್ಮ-ನಿಮ್ಮ ಸಾಮೂಹಿಕ ಅಳಿಸುತ್ತಾನೆ.

ಅಲ್ಲಮ ಪ್ರಭುವಾದ......../ಶಿಲ

ಇನ್ನೂ ಹಲವರಿದ್ದಾರೆ ಸ್ವಾಮಿ ,
ಅರ್ಧ ನಾವೇ ಸರಿಸಿದ ಈ ಜರತಾರಿ ಪರದೆಯ
ಹಿಂದೆ ಮುಕುರಿದ್ದಾರೆ : ಮುಖ ತೋರಿಸಿ ಪ್ರ-
ಸಿದ್ಧರಾಗುವ, ಪ್ರಸಿದ್ಧರಾಗಿಯೂ ನಿಮ್ಮ ತಲೆ-
ತೂಗಿಸಲಾಗದೇ ಹಳಬರಾದ, ಹೊಸಬರಾಗಿಯೂ
ಹಳಬರ ಹರಕು ರೂಮಾಲಿನಲಿ ತಲೆ ಮರೆಸಿರುವ
ಆರಂಭ ಶೂರತ್ವದ ಕವಿವರೇಣ್ಯರು
ಅವರನ್ನೂ ತೋರಿಸೋಣ ಬಿಡಿರಿ—
ಸ ಅವಕಾಶ
ನಿಮಗಿದ್ದರೆ ಅಂಥಾ ಸಂಯಮ.
ನಮಗಿದ್ದರೆ ಹಾಳು ಸಮಯ

೩೦ ಅಕ್ಟೋಬರ ೧೯೭೨

# ಫ್ರೆಡ್ರಿಕ್ಸ್‌ನು ಬೇಟೆಗೆ ಹೋಗಿ-ಬಂದದ್ದು

(ಒಂದು ವೀರ ಗೀತೆಯು)

'ಫ್ರೆಡ್ರಿಕ್ಸ್, ಫ್ರೆಡ್ರಿಕ್ಸ್, ಹೊರಟೆಯೇನೋ ಶಿಕಾರಿಗೆ,
ನಡೆದೆಯಾ ನೀ ಅರಣ್ಯಕೆ,
ದೂರ ದೂರ
ಜನವಿದೂರ ವಿಪಿನಕೆ, ಯಾರೂ ಇರದ
ಏಕಾಂತಕೆ ?

ನಾನು, ಇವನು ನಿನ್ನ ಮಂದಿ
ಬಂಧು, ದಿಂಧು ಬಾಂಧವರು ನಿನ್ನ
ಹೊತ್ತು ಮರೆವ ಸಂಗರು

ನಮ್ಮ ಕೊಂಡು ಹೋಗದೆ, ಹೊರಟೆಯಾ ನೀ ಒಬ್ಬನೆ ?
ನೀ ಬರುವದಿಲ್ಲ ಸುಮ್ಮನೆ
ತರುವಿ ಒಂದು ಬೇಟೆಯು
ನಿನ್ನ ಬೀಡಿಗೆ

ಬರುವೆ ನಿಲ್ಲೊ ನಾನು ಕೂಡ
ಹೋಗಬೇಡ ಒಬ್ಬನೆ
ಹೆಗಲಿಗೇರಿಸಿ ಗನ್ನನು
ಬೆನ್ನಿಗಂಟಿಸಿ ಬುತ್ತಿಯ

ಹಸಿರು ಹುಲ್ಲೇ ಕಿರೀಟವು
ತಲೆಯ ಕಾಯಲು
ಸೊಪ್ಪು ಸದೆಯೆ ಕವಚವು
ಎದೆಯ ಮುಚ್ಚಲು

ರಟ್ಟೆ ಬಲದಲಿ ನಂಬಿಕೆ
ಇರುವ ತನಕ ಬೇಕೆ,
ಇಂಥ ಸೋಗು, ಮುಖವ ಮಾಚಲು ?

(ಕಾಡಿನಂಗಳದಲ್ಲಿ)

ಕಳ್ಳ ಹೆಜ್ಜೆ ದಿಟ್ಟ ನಡಿಗೆ
ತೂಕ ತಪ್ಪದಂಥ ಜೋಕೆ
ಬಿರುಸಾದಿಸಿ ಅಳ್ಳೆದೆ
ಒರೆಸಿ ನಿಚ್ಚಳ ಕಣ್ಣನು
ಹುಬ್ಬ ಕೊಂಕಿಸಿ, ಎವೆಯ ಪಿಳುಕಿಸಿ
ತೋಳ ಸಾಯುವ ಬಿದಿಯುತ......

ಬೇಗ ನಡೀ ಫ್ರೆಡ್‌ರಿಕ್ಸ್, ಇದು ಶಿಕಾರಿ ಆಟ
ಫ್ರೆಡ್‌ರಿಕ್ಸ್ ೩೦
ದೂರವಿರುವ ಈ ವಿಪಿನದಲ್ಲಿ ಯಾರೂ ಇರದ
ಏಕಾಂತದಲ್ಲಿ
ಓಡು ಓಡು ಮುಂದೆ ನೋಡು
ನಿನ್ನ ಓಟ
ಯಾರು ಬೇಟ ?
ಯಾರ ಬೆನ್ನು
ನಿನಗೆ ಲಕ್ಷ್ಯ?

ಓಡು ಓಡು ನಿಲ್ಲು ನಿಲ್ಲು ಇಲ್ಲಿ ಕೂಡು ಎಲ್ಲ ನೋಡು
ತೆವಳಿ ಹರಿದು ಹಲ್ಲಿಯಂತೆ
ಹಲ್ಲ ಚಾಚಿ ಹಾವಿನಂತೆ

ಕಾದು ನಿಲ್ಲು ಆ ಸಮಯಕೆ: ಚಿಗರೆ ಬೇಟೆ ನಸೀಬಕೆ
ತೋರು ನಿನ್ನಾ ಪನ್ನತಿಕೆ !

ಬೆನ್ನು ನೋವೆ ?
ತೈಲವಿದೆ—ನೀವಿಕೋ
ಪೊದೆಗೆ ಆನಿಸಿ ಆತುಕೊ.
ಹೊಟ್ಟೆಯಲ್ಲಿ ಮುಳ್ಳು ನೋವೆ ?
ಅಜವಾನವ ಜೀರ್ಣಿಸು
ಶವಾಸನದಲಿ ಮಲಗಿಕೊ

ಬೇಟೆಯಲ್ಲಿ ಯಾಕೆ ಭಿಡೆ ? ಭಾತಿಯಿಂದ ಮುನ್ನಡೆ.

(ದಟ್ಟಡವಿಯಲ್ಲಿ ಸಾಹಸ)

ಮಿರುಗುತ್ತಿವೆ ಕಾಜಗುಂಡು
ಅದೇ ಬೇಟೆ ಚಿಗರಿ ಕಣ್ಣು
ಟಾರ್ಚ್ ಹಿಸುಕೀ ಅಂಜಿಸಿ
ನುಗ್ಗ ಬೇಡಾ ನೀ ಧಡಪಡಿಸಿ

ಸಾವಧಾನ ಸಾವಕಾಶ ಸಹನೆಯೊಂದೇ ತಕ್ಕ ಮಂತ್ರ
ಇದೇ ಬೇಟೆ ಸಹಜ ತಂತ್ರ
ನೆನೆಸು ನಿನ್ನಾ ಅಪ್ಪನ
ಅವನ ಗತ್ತು ಕೌಶಲ
ನೆನೆಯ ಬೇಡಾ ಬೆದರಿಯ
ನಿನ್ನ ಜೊತೆಯಾ ಹುಡುಗಿಯ

ಗಿಡಪ ಮರೆಯಾ ನೆರಳಿಗೆ
ಟೊಂಗೆ ಎಲೆಯಾ ತಂಪಿಗೆ
ದಟ್ಟ ಪೊದೆಯಾ ಮರೆವಿಗೆ

ನುಸುಳಿತದೋ ಬೇಟೆಯು ನುಗ್ಗಿತೇನೋ ಜಿಂಕೆಯು

ಕಾಲಗೆಜ್ಜೆಯು ತುಂಡಿಸು
ಗನ್ನು ಕುದುರೆಯು ಜಗ್ಗುತ
ಹುರುಪೇಳುವ ಹೊತ್ತಿದು

ಅಲಲಲಾ ! ಏನೋ ಕಿಚ್ಚು !
ಗನ್ನು ಉಗಿದಾ ಬೆಂಕಿ ಕೆಂಡ !!
ಜಿಂಕೆ ಓಟಕೆ ಅದೇ ಗಂಡ !!!

ಎತ್ತು ಮೇಲಕೆ ಸತ್ತ ಬೇಟೆಯ
ಹೊತ್ತು ನಡೆಯೋ ಬೀಡಿಗೆ

(ಓಣಿಯಲ್ಲಿ ಆಗಮನ)

ಫ್ರೆಡ್‌ರಿಕ್ಸ್ ಬಂದನು ಫ್ರೆಡ್‌ರಿಕ್ಸ್ ! ಅದೋ
ಬೇಟೆಯು ತಂದನು ಫೆಡ್‌ರಿಕ್ಸ್ !!

ಚಿಗರೀ ಬ್ಯಾಟೀ ಧೀರಾ | ನೀ
ನಮ್ಮಯ ಓಣೀ ಶೂರಾ
ಗೆದ್ದೀ ಬಂದಿಯೊ ಬೀಡಿಗೆ
ಸುದ್ದೀ ತಂದಿಯೊ ನಾಡಿಗೆ

ಬನ್ನಿರಿ ಬನ್ನಿರಿ ಲಲನೆಯರೇ
ತನ್ನಿರಿ ತನ್ನಿರಿ ಮಂಗಳ ದ್ರವ್ಯ
ಎತ್ತಿರಿ ಆರತಿ ಈ ಮುಖಕೆ
ಹಚ್ಚಿರಿ ರಕ್ತವ ಹಣೆಗೆ

೧೯ ಅಕ್ಟೋಬರ್ ೧೯೭೫

# ಕುರುಚಲ ಪದ್ಯಗಳು

**ಬೆಳುವೊಲದಲ್ಲಿ ಮುಂಗಾ**

ಮೇ ತಿಂಗಳ ಮಳೆ : ವೈ-
—ಶಾಖದ ರ ಮ್ಯೆ
ಬೆವರು
ಋತುಗಳ ಅರಸ ವ.
—ಸಂತ ತು ಬರಿ
—ಗಾಲಲಿ ಕೆ ರು

**ಬೆಳುವೊಲದಲ್ಲಿ ಹಿಂಗಾರು**

ಚಳಿಗಾಲದ ಹೊಸ್ತಿಲದಲಿ ಮೈ—
—ಚಾಚುವುದಿದು ಬಾಯ್
ತೆರೆದು
ಹಿಂಪಡಿಸುತ ಉಗುಳಿ
ಇರುಳೊಂದರಲೇ ನಾಲ್ಕಾರು ಸಲ
ಭಲೆ ರತಿ
ಕೇಳೀ ನಿರತ,
ಕೊನೆ ಆಟದ ಬೆವರಿಳಿಸುತ ನಿಜ
ಸ್ಖಲಿಸದಲೇ ನಿಂತ

**ಚಾರಿತ್ರ್ಯವೂ ಕವಿತೆಯೂ**

ದೇಶಕೆ ಬೇಕು ಚಾರಿತ್ರ್ಯ,
                    ಕುಂಕುಮ ಹೇಗೋ ಹಾಗೆ
                    ಮುತ್ತೈದೆಯ ಹಣೆಗೆ !
ಕವಿತೆಗೆ ಬೇಕೆ ಛಂದೋ ಪ್ರಾಸಾ,
                    ಸೂಳೆಗೆ ಹೇಗೋ ಹಾಗೆ
                    ಸೋಗಿನ ವಯ್ಯಾರಾ ?

ಅಪಘಾತ

ಆ
ಮನೆ
ಯ
ಹರಯದ
ಹುಡುಗಿಯ ಮೇ
ಲೆ ನೆರೆಮನೆಯ
ಹದಿ ಹರಯದ
ಹುಡುಗನ ಕಣ್
          ತ್ತು

ಅವನತ ಮುಖಿ ಹುಡುಗಿ ಇನ್ನೂ ಮುಖ
ಮೇಲಕ್ಕೆ ಎತ್ತಿಲ್ಲ

## ಕವಿ ತಾ ವೇದನೆ

ದೇ–
ಸಾಯಿ
ಕ ತ್ತಿಗೆ ಮಟ ಕುಡಿ
ದು
ನಿಶೆ
ಏರಿ ಸಿಗರೇಟು ಹಚ್ಚಿ ಸ್ವರ–
ಚಿತಕವಿ
ತಾ
ನೀ
ವೇದನೆಗೆ ತೊಡಗಿದನೆಂದರೆ
ಕವಿ
ತೆಯ ಮಾತು
ಹೊಗೆ
ಯಾಗಿ ಹವೆಯಲ್ಲಿ ಲೀನ
ಲೀನ
ಲೀನ

ಬೆಂಕಿ ತಲೆ
ಸುಟ್ಟ ಬೆರಳ ಮಿಡುಕುವ ಕವಿ
ತ್ರೆ ಬೆಳ್ಳಂ ಬೆಳತನ
ಕ ಧಾರಾವಾಹಿ
ನಿಶೆ
ಇಳಿದು ಹೊರ
ಬಿದ್ದು ರಸ್ತೆ
ಗೆ ಅಡ್ಡಾ ದಿಡ್ಡಿ ಹರದಾಡಿದ
ನೆಂದರೆ–
ಸಿಟ್ಟಿನ ಟ್ರಕ್ಕಿನ
ಡಿ ನುಚ್ಚು ನೂರು
ದೇ
–ಸಾಯಿ ಕವಿ
ತಾ

## ಒಂದು ತರದ ನಸೀಬ

ಗೌಡ ಗೆಳೀಳಾ–
ಡ ಹೊರಳಾ
ಡ ಸತ್ತಾ
  ಗೌಡ
ತಿ ಹೊರಳಾ
ಡ ಅತ್ತಾ
  ಗೆಳೀಳಾ
ಡ ಮರೆತು
  ದಿವಂ
ಗತ ಗೌಡ
ನ ಸಾಲಿಗ
ನ ತಲೆ–
ಯಲ್ಲಿ ಹಿತ–
ವಾದಿ ಬೆರಳಾ–
ಡಿಸಿದಳು

## ಇನ್ನೊಂದು ತರದ ನಸೀಬ

ಲಕ್ಕಿಯಂಥಾ ನಸೀಬ
ವಾನ ಹುಡುಗಿ ಸುತ್ತ ಹತ್ತೂರಲ್ಲಿ
ಇನ್ನೊಬ್ಬಳಿಲ್ಲಾ
ಇದ್ದರ, ಗೊತ್ತಿದ್ದವನೆ ಬಲ್ಲಾ
ಗುಡ್ಡಾಣಿ ಪಜ್ಜಿಯ ಹೊಟ್ಟೆಯ
ಗಜಗದ ಸೈಜಿನ ಮೂಗಿನ
ಬಿಳಿಯ ಮಳ್ಳು ಗಣ್ಣಿನ
ಲಕ್ಕಿಗೆ–
ಬೆನ್ನಿಗಂಟಿದ ಹೊಟ್ಟೆಯ
ಚೂಪು ತೆಳ್ಳನೆ ಮೂಗಿನ
ಗುಂಡು, ಕುಡ್ಡ ಕಣ್ಣಿನ
ಲಕ್ಕ
ಗಂಟು ಬಿದ್ದಿದ್ದಾನೆ
ಜೋಡಿ
ಎಂಥಾ
ಪಸಂದ !

# ನನ್ನ ಮನೆ – ನನ್ನ ದೇಶ

ನಾಲ್ಕು ಗೋಡೆಗೆ ಅಲ್ಲಲ್ಲಿ
ಕಿಂಡಿ ಕಿಡಕಿ ಬಾಗಿಲುಮಾಡವಿದ್ದರೆ—
ಮನೆ : ಅಂದರೆ ಸುವ್ಯವಸ್ಥಿತ ಬೀಡು

ಹೊತ್ತು ಹೊತ್ತಿಗೆ ಗಂಟಲಿಗಿಳಿವ ಚಹ; ಹೊಟ್ಟೆ ತಣಿಸುವ ಊಟ-
ಉಪಹಾರ; ಮಕ್ಕಳಿಸ್ಸಿ, ಮುಗ್ಧ ಹಟಮಾರಿ-

ತನ, ಉಡಾಳ ನಗೆ, ಕೇಕೆ, ಹಾವಳಿ ನಡುವೆ
ಪುರಸೊತ್ತು ಆದಾಗೆಲ್ಲ ಲವಲವಿಕೆಯಿಂದೋಡಾಡಿ
ಒಲವು ಚೆಲ್ಲುವ ಮಡದಿಯು ಸಹಜ ಸಹ—ಗಮನ.
ಎಲಾ ಹೊತ್ತು ಹೊತ್ತಿಗೆ ಒದಗುವ ಆಪ್ಯಾಯಮಾನ.

ದೇಶವೆಂದರೆ ಹೀಗಲ್ಲ. ದೇಶಾಂತರಕ್ಕೊಮ್ಮೆ ಮೇಲಿನೆಲ್ಲಾ
ಸುಕುಮಾರ ಸೌಕರ್ಯಗಳ ವರ್ಜಿಸಿ ಹೋದಾಗ—
ಯಾವುದೂ ಆಪ್ಯಾಯಮಾನವಾಗದೆ, ಹೊಟ್ಟೆ-ಬಟ್ಟೆ, ನೆತ್ತಿ,—
-ಗಳ ತಾಪತ್ರಯಕ್ಕಾದರೂ ತಕ್ಕ ಉತ್ತರವಾಗದ ದೇಶ
ಬೇಡವಾಯಿತು.

ಕವಿತೆಯಲ್ಲಲ್ಲಾ ಇಂಥಾ ನಕಲೀ ಮಾತೇಕೆ ?
ಅಸಲೀ ಮಾತು ಇಷ್ಟೆ—
ಇಲ್ಲಿ, ಹೊತ್ತು ಹೊತ್ತಿಗೆ ಏನೂ ಸಿಕ್ಕದಿರಬಹುದು.
ತಪ್ಪು ದೇಶದ್ದಲ್ಲ. ಸರಕಾರದ್ದಂತೂ ಖಂಡಿತ ಅಲ್ಲ.

ಹವಾಮಾನ, ಮಳೆ—ಬೆಳೆ, ಪೇಟೆಧಾರಣೆ, ಕಾಲ—ಮಾನಗಳ
ಅನಿಷ್ಟ ಶಾಪ !

ಕಾವ್ಯವಿಲ್ಲವೇನು ಇಲ್ಲಿ—ಮಡದಿಯಷ್ಟೇ ಚೆಲುವಾದ,
ಒಲುವಿರುವ, ಲವಲವಿಕೆಯಿಂದ ಓದಿಸಿಕೊಳ್ಳುವ ಸುಕುಮಾರ ಕಾವ್ಯ ?

ಹಾಗೇ, ಮನೆ—ಮಕ್ಕಳಂತೇ ಹಟ
-ಮಾರಿ ದೇಶಭಕ್ತರ ತಂಡ ? ಮುಗ್ಧತೆಯ ಇಸಿ ಮಾಡಿ,
ನೆಲ ರಟ್ಟು ರಾಡಿ ಮಾಡುವ ಉದ್ಧಾರಕರ ಟೋಳಿ ? ಒದರು—ಕೇಕೆ
ಗದ್ದಲದಲ್ಲಿ ಏಕಾಂತ, ಲೋಕಾಂತ ಮಾಡುವ ರಾಜರು, ರಾಜ—
ಕಾರಣರು, ಮಂತ್ರಿ ಮಾನ್ಯ ಸನ್ಮಾನ್ಯರು ?

ಹಾಗೆ ನೋಡಿದರೆ ಮನೆಯಂತೇ ದೇಶ.
ದೇಶವೇ ಮನೆ: ಗದ್ದಲ
ಸಹಿ ಸಹಿಸಿ ಸೊರದಿರುವ ಸದ್ ಗೃಹಸ್ಥರಿಗೆ !

ದೇಶ—ಮನೆಗಳ ನಡುವಣ ವಿಸ್ಮಯದ ಬದುಕಿದೆಯಲ್ಲ,
ಅದು ಸದಾ ತುರ್ತಿನದು. ಆಪತ್
ಕಾಲೀನ ಅವಸರದ್ದು.

೧೪ ಡಿಸೆಂಬರ್ ೧೯೭೫

# ಸೂಟಿಯಲ್ಲಿ ಪ್ರೇಮ ಪ್ರಸಂಗದ ತಹ ತಹ

ಎರಡೂ+ಪೂಜೀ=ಎರಡೇ
ನಾನೆಂದಿಗು ಮಾತ್ರ ಒಂದೇ

ಈ ಪೋರೀಗೇನೊ ಕನಸು ?
ಯಾಂವನ ಮೇಲೋ ಮನಸು !
ಕೆದಕಲು ಹೋದರೆ ಮೌನ !
ಸೆಳೆದರೆ ಎಲ್ಲೀ ಮಾನ !

ಎರಡೂ+ಪೂಜೀ=ಎರಡೇ
ಮೂಕನ ಪ್ರೇಮವು ಕುರುಡೇ?

ಜೋಕೆಗೆ ಬೇಕು ಬುದ್ಧಿ
ಜಾರಿದರಷ್ಟೇ ಸುದಿ
ಜೀವವು ನಿಲ್ಲದು ಖಾಲಿ
ಕಲ್ಪನೆ ತುಂಬಾ ಜ್ವಾಲಿ

ಎರಡೂ+ಪೂಜೀ=ಎರಡೇ
ನಾನೆಂದಿಗು ಮಾತ್ರಾ ಹೀಗೇ

ಇಳಿದರೆ ಮೇಲಿನ ಮೆಟ್ಟಲು
ಕೆಳಗೋ ಮುಂದಿಯ ಗೋಜಲು!
ಕಪ್ಪಿನ ತುಂಬಾ ಕಾಫೀ
ಕುಡಿಸಿದರಷ್ಟೇ ಮಾಫೀ

ಎರಡೂ+ಪೂಜೀ=ಎರಡೇ
ನೆನೆಸಿದರೆಲ್ಲಾ ಬರಡೇ

ಕಳೆಯಿತೆ ಎದೆಯಂಲಿ ಭಾರಾ
ಕಾಡಿದನೆಷ್ಟೋ ಮಾರಾ !
ಪ್ರಾಣಕೆ ಹತ್ತಿತು ಧಗೆಯು!
ಕಣ್ಣಿಗೆ ಕವಿಯಿತು ಹೊಗೆಯು !!

ಮಾತಿಗೆ ಎಲ್ಲಿದೆ ಬೈಕ್ಕು
ಪ್ರೇಮಿಗೆ ಸಲ್ಲದು ಸೊಕ್ಕು
ಬಂದರ ಉಳಿಯದು ಪ್ರಾಣ
ಗಳಿಸಲು ಬೇಕು ತ್ರಾಣ

ಕೊನೆಗೂ ಎರಡೂ+ಪೂಜೇ ಎರಡೇ
ಹರೆಯಕೆ ಪ್ರೇಮವೂ ಸೊಗಡೇ

೪ ಮೇ, ೧೯೭೫

ಥಳ್ಳನೆಯ ಪರೆಯ ಒಳಗಡೆ

ಅವಿತದ್ದು ಅಸ್ಪರ್ಶ ಹಾವಿನ ನುಣುಪು ಮೈ

—ಮೌನಿಕ್ಕಳದಲ್ಲಿ ಪದಗಳ ಇರುಕಿನಲ್ಲಿ ತೂರಿ—

ಸರಸರ ತೆವಳಿದಂತೆ

ಮೈಯ ಗಹನ ಕಳೆದುಳಿದದ್ದು—

ಇನ್ನೊಂದು ಮತ್ತೊಂದು ಥಳ್ಳನೆಯ

ತಾಗಿದರೇ ಉದುರುವ

ಗರಿಗರಿ ಪರೆಯ ಸುರುಳಿ ಸುರುಳಿ

# ಜಾಕ್ವಿಸ್ ಪ್ರೇವರ್‌ನ ಫ್ರೆಂಚ್ ಪದ್ಯಗಳು

## ಒಂದು ಪದ್ಯ

ಮೇಜ ಮೇಲಿನ ಕಿತ್ತಳೆಗೆ ಹೊನ್ನ ಬಣ್ಣದ ಹೊಳಪು
ಹಚ್ಚಡದ ಮೇಲೆ ಹರವಿ ಬಿದ್ದದ್ದು
ನಿನ್ನ ಉಡುಪು ತೊಡಪು.
ನೀನೋ, ನನ್ನ ಮಗ್ಗುಲಲ್ಲಿ :
ನನ್ನ ಹಾಸಿನ ಮೇಲೆ.
ತಣ್ಣನೆಯ ಈ ರಾತ್ರಿಯಲಿ ನೀನಿತ್ತ
ಈ ಸವಿದಾಣಿಕೆ-
ಎಷ್ಟೊಂದು ಬೆಚ್ಚಗೆ ಹಾಗೂ ಹಚ್ಚಗೆ :
ನನ್ನ ಜೀವಕ್ಕೆ !

## ಹಾಡು

ಯಾವ ದಿನವಿದು, ದಿನ ಯಾವುದಿಂದು ?
ಇದು ಎಂದಿನಂಥಾ ದಿನ ಎಲ್ಲ ದಿನದಂತೇ ಇದು
ಗೆಳತಿ, ನನ್ನ ಒಲವಿನ ಗೆಳತಿ,
ಇದುವೆ ಜೀವನ, ಇಡಿಯ ಜೀವನವೇ ಇದು,
ಹೀಗೆ.
ನಲುವಿನವಳೆ, ನನ್ನ ಒಲಮೆಯವಳೆ,
ಒಬ್ಬರನೊಬ್ಬರು ನಾವು ಪ್ರೀತಿಸಿದೆವು :
ಅಂತೇ ಬದುಕಿದ್ದೇವೆ ನಾವು
ಬದುಕಿದ್ದೇವೆ ನಾವು:
ಏಕೆಂದರೆ ಪ್ರೀತಿಸಿದ್ದೇವೆ ಒಬ್ಬರನ್ನೊಬ್ಬರು.
ಏನೂ ಗೊತ್ತಿಲ್ಲ ನಮಗೆ—ಈ ಬದುಕೆಂದರೇನೆಂದು.
ಏನೂ ಗೊತ್ತಿಲ್ಲ ನಮಗೆ—ಈ ದಿನ ಯಾವುದೆಂದು.
ಏನೂ ಗೊತ್ತಿಲ್ಲ ನಮಗೆ—ಈ ಪ್ರೀತಿ, ಹೀಗೆಂದರೆ-
ಏನೆಂದು.

# ಕೌಟುಂಬಿಕ

ಅಮ್ಮ ಹೆಣಿಗೆ ಹಾಕುತ್ತಾಳೆ ಮನೆಯಲ್ಲಿ
ಮಗ ತೊಡಗುತ್ತಾನೆ ಕದನದಲ್ಲಿ-ದೂರದಾಚೆಯ ಸಂಗ್ರಾಮ ರಂಗದಲ್ಲಿ
ಅಮ್ಮ, ಹೆಣಿಗೆಯ ಕೆಲಸವೇ ಸಹಜದ ಕೆಲಸವೆಂದು ಖಾತ್ರೀ ಮಾಡಿ—
ಕೊಂಡಿದ್ದಾಳೆ, ಆ ಅಮ್ಮ

ಅಪ್ಪ, ಅವನೇನು ಮಾಡುತ್ತಾನೆ ಆ ಅಪ್ಪ ?
ಅವನಿಗಿದೆ ವ್ಯಾಪಾರ–ವ್ಯವಹಾರ : ಪೇಟೆಯಲ್ಲಿ: ಗಲ್ಲೆ ಪೆಟ್ಟಿಗೆ ಮೇಲೆ.
ಅವನ ಹೆಂಡತಿ ಹೆಣಿಗೆ ಹಾಕುತ್ತಿದ್ದರೆ ಮಗ ತೊಡಗುತ್ತಾನೆ ಯುದ್ಧ
ದಲ್ಲಿ. ತನಗೆ ವ್ಯಾಪಾರ—ವ್ಯವಹಾರ

ಅಪ್ಪ ಲೇವಾ—ದೇವಿಯೇ ಸಹಜದ ಕೆಲಸವೆಂದು ಖಾತ್ರೀ ಮಾಡಿ
ಕೊಂಡಿದ್ದಾನೆ ಆ ಅಪ್ಪ

ಮಗ, ಅವನೇನು, ಯಾವುದನ್ನು, ಏನೆಂದು ಖಾತ್ರೀಪಡಿಸಿ-
ಕೊಂಡಿದ್ದಾನೆ, ಆ ಮಗ ?

ಅವನು ಏನೂ ಖಾತ್ರೀಪಡಿಸಿಕೊಂಡಿಲ್ಲ, ಯಾವುದನ್ನೂ.
ಅಮ್ಮ ಹೆಣಿಗೆಯಲ್ಲಿ; ಅಪ್ಪ ದುಡ್ಡೆಣಿಸುವಲ್ಲಿ; ಇವನು ಹೋರಾಟದಲ್ಲಿ.
ಯಾವಾಗ ಮುಗಿಸುವನು, ಇವನು ತನ್ನ ಈ ಹೋರಾಟ ?
ಯಾವಾಗ ಹೋಗುವನಿವನು, ವ್ಯಾಪಾರಕ್ಕೆ ತಂದೆ ಕೂಡ ?
ಕದನ-ವಿರಾಮವಿಲ್ಲದೆ—ನಡೆದೇ ಇರುತ್ತದೆ, ಯಾವತ್ತೂ: ಅಮ್ಮ
ಹೆಣಿಗೆಯಲ್ಲೇ ಕಾಲ ದೂಡುತ್ತಾಳೆ

ಅಪ್ಪ ತೊಡಗಿಯೇ ಇರುತ್ತಾನೆ ವ್ಯಾಪಾರದಲ್ಲಿ,ಲಾಭ-ಹಾನಿಯ ಕೊಡು
ಕೊಳ್ಳುವಲ್ಲಿ.
ಮಗ, ರಣಾಂಗಣದಲ್ಲಿ ಇರಿಯಲ್ಪಟ್ಟಾಗ,ವಿರಾಮಗೊಳ್ಳುತ್ತದೆ ಅವನ
ಅವಿರತ ಹೋರಾಟ.

ಅಪ್ಪನೂ, ಜೊತೆಗೆ ಅಮ್ಮನೂ ಹೋಗಿ ಬರುತ್ತಾರೆ ಮಸಣಕ್ಕೆ-
ಮಗನ ಅಂತಿಮ ಭೆಟ್ಟಿಗೆ.
ಆ ಹೋಗಿ—ಬರುವ ಕೆಲಸದಂತೆ, ಕೊನೆಗಾಲದ ಭೆಟ್ಟಿಯೂ
ಸಹಜದ ಕೆಲಸವಾಗಿ ತೋರುತ್ತದೆ ಅವರಿಗೆ.
ಬದುಕು ಮುಂದುವರಿಯುವುದು ಮಾತ್ರ: ಹೆಣಗೆಯಲ್ಲಿ, ಕದನ
ಮುಂದುವರಿಸುವಲ್ಲಿ, ವ್ಯಾಪಾರ ನಡೆಸುವಲ್ಲಿ

ವಾಪಾರ ಯುದ್ಧ ಹೆಣಗೆ ಕದನ
ವ್ಯಾಪಾರ ವ್ಯವಹಾರ ಲಾಭ ಹಾನಿ
ಮುಂದುವರಿಯುವ ಬದುಕು ಇದು—ಹೀಗೇ ಬದುಕು.

ಮಸಣದೊಂದಿಗೆ ಅವಿನಾಭಾವಿಯಾಗಿರುವ ಬದುಕು.

೧೦ ಜೂನ್ ೧೯೭೬

# ವ್ಲದಿಮಿರ್ ಹೋಲಾನ್‌ನ ಝೆಕ್ ಪದ್ಯ

## ಲಿಫ್ಟಿನಲ್ಲಿ ಭೆಟ್ಟಿ

ಹೆಜ್ಜೆ ಇಕ್ಕಿದೆವು ಲಿಫ್ಟಿನಲ್ಲಿ ಜತೆಯಾಗಿ
ನಾವಿಬ್ಬರೇ ಇಬ್ಬರು ಲಿಫ್ಟಿನ ಏಕಾಂತದಲ್ಲಿ.
ಒಬ್ಬರನ್ನೊಬ್ಬರು ದಿಟ್ಟಿಸಿದ್ದೆಷ್ಟೋ ಅಷ್ಟೇ–ಆಳವಾಗಿ.
ಮತ್ತೇನನ್ನೂ ಮಾಡಲಿಲ್ಲ ನಾವು

ಲಿಫ್ಟಿನಲ್ಲಾಗ ಪ್ರಾಣಗಳೆರಡು : ಕ್ಷಣ ಮಾತ್ರ ಒಂದೇ
ತುಂಬುತನದ, ಆನಂದದುದ್ರೇಕ ಗಳಿಗೆ.

ಐದನೆಯ ಅಂತಸ್ತಿನಲ್ಲಾಕೆ ನಿರ್ಗಮಿಸಿ—
ನಾನೊಬ್ಬನೇ ಲಿಫ್ಟಿನಲ್ಲಿ : ಮೇಲೆ ಮೇಲಕ್ಕೆ.
ಇನ್ನೆಂದೂ ಕಾಣಲಾರೆ ನಾ, ಆಕೆಯನ್ನು.
ಮುಖಾಮುಖಿ ಭೆಟ್ಟಿ ಅದೊಂದೇ: ಅಪೂರ್ವ, ಅಂತಿಮ.

ಅವಳ ಬೆಂಬತ್ತಿ ನಾನೂ ಹೊರಟಿದ್ದರೆ, ಒಂದು ವೇಳೆ ?
ಅವಳಿಟ್ಟ ಹೆಜ್ಜೆ ಹಾದಿಯಲ್ಲಿ ಹೆಜ್ಜೆಯೂರುವ ಸತ್ತ
ಮನುಷ್ಯನಾಗಿ ಬಿಡುತ್ತಿದ್ದೆ.

ಅವಳಾಗಿಯೇ ನನ್ನ ಬಳಿ ಮರಳಿ ಬಂದರೆ, ಒಂದು ವೇಳೆ ?
ಹಾಗೆ ಮರುಳುವುದು ಇಲ್ಲಿಂದ ಅಲ್ಲ
ಅನ್ಯಲೋಕದಿಂದ.

೨೩ ಜೂನ್ ೧೯೭೬

ಅದೃಶ್ಯ ರೇಖೆಯ ಈ ನವಿರು ತಂತಿ
ಯ ಗುಂಟ ನಡೆದಾಡಿ ನಡೆದಾಡಿ
ಪೂರಾ ನಡವಳಿಕೆಯೇ ರೂಢಿಗತ
ತೊಡಕಡಿಕೆಯಲ್ಲೂ ಜೋಲಿ ತಪ್ಪದ ಹಿಡಿತ :

ನಡಿಗೆಯಲ್ಲಿ ನುಡಿಯ ಹೆಣಿಗೆಯಲ್ಲಿ

ಎದೆಯ ತಟ್ಟಿದ ಹುಡುಗಿ : ಕಣ್ಣ ಕಟ್ಟಿದ
ಚಿತ್ರ : ಬಣ್ಣ ಬಣ್ಣದ ಕನಸು
ಮೌನದಲೆ ಮಾತಾಗಿ
ಮಾತಿನಲೆ ನೋವಾಗಿ
ನೋವಿನಲಿ ಅರಿವಿನ ಗೆರೆಯನೆಳೆದು

ಸಹನೆ ರೇಖೆಯ ಈ ಕಗ್ಗಾಡ ಹಾದಿ
ಯಗುಂಟ ನಡೆದಾಡಿ ನಡೆದಾಡಿ

ಅಕ್ಷರದಲ್ಲೀಗ ಕೊರೆದದ್ದು ಅಮೂರ್ತ, ವಿಕಲ್ಪ
ತೊಡಬೇಕು ಇನ್ನಾದರೂ ಜೋಲಿ ತಪ್ಪದ ಸಂಕಲ್ಪ

## ನೆನೆಕೆಗಳು

ನನ್ನ ಈ ಪದ್ಯ ಸಂಕಲನ ಈ ರೂಪ ತಾಳಲು
ಒಂದಲ್ಲ ಮತ್ತೊಂದು ತರದಲ್ಲಿ
ಪ್ರೇರಕರಾದ, ಕಾರಣರಾದ, ಸಹಕರಿಸಿದ
ಸರ್ವಶ್ರೀ ಗೋಪಾಲಕೃಷ್ಣ ಅಡಿಗ, ಜಿ. ಎಸ್. ಶಿವರುದ್ರಪ್ಪ, ಡಿ.ಎಸ್. ಕುರ್ತಕೋಟಿ, ಸುಮತೀಂದ್ರ ನಾಡಿಗ, ವಿ. ಶಿವಾನಂದ;
ಗೆಳೆಯರಾದ ಸರ್ವಶ್ರೀ—ಜಿ.ಎಸ್. ಶಿವಪ್ರಕಾಶ, ಸುಬ್ರಾಯ ಚೊಕ್ಕಾಡಿ, ಗಂಗಾಧರಮೂರ್ತಿ, ಅಬ್ದುಲ್ ಮಜೀದ್‌ಖಾನ್ ಜಗದೀಶ, ಈಶ್ವರಚಂದ್ರ, ದೊಡ್ಡರಂಗೇಗೌಡ, ಕರ್ಜಗಿ, ಆನಂದ ಝುಂಜರವಾಡ;
ಅಶೋಕ ಕುಲಕರ್ಣಿ,
ಮಾಧವ ಕ ಲಕರ್ಣಿ,
ಹರಿದಾಸ, ಯಾದವಾಡ, ವನಹಳ್ಳಿ,
ಮಹಾಬಲರಾವ; ಆರ್ಥಿಕ ನೆರವು ನೀಡಿದ ಸಿಂಡಿಕೇಟ್ ಬ್ಯಾಂಕಿನ ಎಸ್. ಎಂ. ನಾಯಕ್, ಮುರಲೀಧರಾಚಾರ್;
ಸೌ. ಶೋಭಾ—
ಇವರಿಗೆಲ್ಲ
ಹಾಗೂ ಆದಾಗ ಕವಿತೆ ಪ್ರಕಟಿಸಿ ಸಹಕರಿಸಿದ—
ಸಾಕ್ಷಿ. ಪ್ರಜಾವಾಣಿ, ಸಂಕ್ರಮಣ, ಕರ್ಮವೀರ, ಕಸ್ತೂರಿ, ಉದಯ ವಾಣಿ, ವಿಶಾಲ ಕರ್ನಾಟಕದ ಸಂಪಾದಕರುಗಳಿಗೆ;
ಬಾನುಲಿಯಲ್ಲಿ ಬಿತ್ತರಿಸಿದ ಆಕಾಶವಾಣಿ (ಬೆಂಗಳೂರ—ಧಾರವಾಡ) ನಿಲಯದವರಿಗೆ; ಕರಡು ಪ್ರತಿಯ ಮೇಲೆ ಕಣ್ಣಾಡಿಸಿದ ವಿದ್ಯಾರ್ಥಿ ಮಿತ್ರ ಜಿ. ಪಿ. ಮಾಂತಾಲಿಕ ದೇಸಾಯಿಗೆ;
ಮುದ್ರಿಸಿದ ರವಿ ಪ್ರಿಂಟರ್ಸ್‌ನ ಎಸ್.ಜಿ. ಹೊನ್ನಳ್ಳಿ ಇವರಿಗೆ
ಹೃತ್ಪೂರ್ವಕ ವಂದನೆಗಳು ಮತ್ತು ಧನ್ಯವಾದಗಳು.

—ಶಾಮಸುಂದರ ಬಿದರಕುಂದಿ

# ಆಲೋಚನ ಪ್ರಕಾಶನ

ಶಾಮಸುಂದರ ಬಿದರಕುಂದಿಯವರು ಭಾಷೆ ಮತ್ತು ಅನುಭವಗಳೊಡನೆ ನಡೆಸುತ್ತಿರುವ ಪ್ರಯೋಗಗಳು ವಿಶಿಷ್ಟವಾದವು: ವ್ಯಕ್ತಿ ತನ್ನ ಮಿತಿಗಳನ್ನು ಗುರುತಿಸಿಯೂ ಅವುಗಳೊಡನೆ ಎಗ್ಗಿಲ್ಲದೆ ಸೆಣಸಬೇಕೆಂಬುದೇ ಅವರ ನಿಲುವಾಗಿರುವಂತೆ ತೋರುತ್ತದೆ. ಆದಕಾರಣವೇ ಇವರು – ನಾನು ಬಲ್ಲಹಾಗೆ—ವೈಯಕ್ತಿಕ ಜೀವನದಲ್ಲಾಗಲೀ, ತಮ್ಮ ಕಾವ್ಯಕ್ಕೆ ಸಂಬಂಧಪಟ್ಟ ಕಾಳಜಿಗಳ ಬಗೆಗಾಗಲಿ 'ಪೋಸ್' ತಳೆಯುವಲ್ಲಿ ಆಸಕ್ತರಾದಂತಿಲ್ಲ.

'ಅಜ್ಜ ಗಾವಲು' ಪ್ರಕಟಗೊಂಡ ಬಳಿಕಿನ ಈ ಐದು ವರ್ಷಗಳಲ್ಲಿ ಬಿದರಕುಂದಿಯವರು ತಮ್ಮ ಅನುಭವಗಳ ಸಾಂದ್ರತೆಯನ್ನು ಪ್ರಕೃತ ಪದ್ಯಗಳಲ್ಲಿ– ಒಡಮೂಡಿಸುವಲ್ಲಿ ಗಳಿಸಿರುವ ಕೌಶಲ್ಯವು ಇಂತಹ ಸಾಧನೆಗಾಗಿ ಈತ ಪಟ್ಟ ಪಾಡನ್ನು ಕೂಡ ಪ್ರತಿಧ್ವನಿಸುತ್ತದೆ.

ಮುಖ್ಯವಾಗಿ, ಬಿದರಕುಂದಿಯವರ ಕವನಗಳ ಗುಣ 'ಹೇಳಬೇಕಾದುದನ್ನು ಮಾತ್ರ ಹೇಳುವುದೇ ಆಗಿದೆ; ಈ ಕಾರಣ : ಇಲ್ಲಿನ ಪದ್ಯಗಳು 'ನಿಜವಾದ'ವು. ಪ್ರಸಕ್ತ ಜೀವನದ ಸಕಲ ಕ್ಷೇತ್ರಗಳಲ್ಲೂ ಗೊಂದಲ ಎದ್ದು ಕಾಣುತ್ತಿರುವಾಗ, ವ್ಯಕ್ತಿ ತನ್ನ ಬಗ್ಗೆ ಹಾಗೂ ಸಮಷ್ಟಿಯ ಬಗ್ಗೆ ಮೂಲಭೂತವಾದ ಶ್ರದ್ಧೆ ಹಾಗೂ ಗೌರವಗಳನ್ನು ಕಾಪಾಡಿಕೊಂಡು ಬರುವುದು ಈ ಕಾಲಮಾನದಲ್ಲಿ ಅಸಾಧಾರಣ ಕೆಲಸವಾಗುತ್ತದೆ.

ಇಂತಹ ಶ್ರದ್ಧೆ, ಗೌರವಗಳನ್ನು ಇಟ್ಟುಕೊಂಡಿರುವ ಬಿದರಕುಂದಿ ತಮ್ಮ ಕಾವ್ಯದ ಮೂಲಕ ತಮ್ಮದೇ ಆದ ವಿಶಿಷ್ಟ ಧ್ವನಿ ಹೊರಡಿಸುವಲ್ಲಿ ಪಡೆದಿರುವ ಯಶಸ್ಸು ಈ ಸಂಕಲನದಿಂದ ವ್ಯಕ್ತವಾಗುತ್ತದೆ.

ಜಯಸುದರ್ಶನ